ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೪ ಏಪ್ರಿಲ್ ೨೦೦೮ ಸಂಚಿಕೆ : ೪



ಏಪ್ರಿಲ್ ೧ ರಂದು ಪರಮಪೂಜ್ಯ ಶ್ರೀ ಶ್ರೀಗಳವರಿಗೆ ನೂರು ವಸಂತಗಳು ತುಂಬಿದ ಶುಭ ಸಂದರ್ಭದಲ್ಲಿ ಶ್ರೀಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಹಾಗೂ ಹರಗುರು ಚರಮೂರ್ತಿಗಳು



ಶ್ರೀಮಠದ ಆವರಣದಲ್ಲಿ ಭಕ್ತರ ಮಹಾಸಾಗರ



ಪರಮಪೂಜ್ಯ ಶ್ರೀಗಳವರಿಂದ ನುಡಿ ಸಂದೇಶ



ರಾಜ್ಯ ಸರ್ಕಾರದ ಪರವಾಗಿ ಮುಖ್ಯ ಕಾರ್ಯದರ್ಶಿ ಶ್ರೀ ಸುಧಾಕರ ರಾವ್ ಅವರಿಂದ ಪೂಜ್ಯರಿಗೆ ಭಕ್ತಿ ಸಮರ್ಪಣೆ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಸೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೪ ಏಪ್ರಿಲ್ ೨೦೦೮ ಸಂಚಿಕೆ : ೪



ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ



ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104




## ಒಳಪುಟಗಳಲ್ಲಿ ....................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ಕಂಗಳ ಕೊನೆಯಲ್ಲಿ ಚೆಂಗಣಿಗಿಲಕಂಡೆ*
*ಆ ಚೆಂಗಣಗಿಲ ಕಮಲವ ಕೊಯ್ದು*
*ಶಿವಲಿಂಗಪೂಜೆಯ ಮಾಡಬಲ್ಲ ಶರಣಂಗೆ*
*ಸಂಸಾರ ಸಂಗದ ಹೊದ್ದಿಗೆಯೆಂದೇನು ಹೇಳಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಚಂದ್ರಸೂರ್ಯಾಗ್ನಿ ಮಂಡಲತ್ರಯದ ಮಧ್ಯದಲ್ಲಿ, ಮೂದಳ ವರ್ಣ ಸ್ವರೂಪಾದ ಹೃದಯ ಕಮಲವನ್ನು ಜ್ಞಾನದೃಕ್ಕಿನಿಂದೆ ನಿರ್ದೇಶನವಾದೆನೆಂಬುದೀಗ ಕಂಗಳ ಕೊನೆಯಲ್ಲಿ ಚೆಂಗಣಿಗಿಲ ಕಂಡೆನೆಂಬ ಶಬ್ದ...

ಅಂತಪ್ಪ ಹೃದಯ ಕಮಲವನು, ಭಾವವೆಂಬ ಹಸ್ತದಿಂದೆ ಆಗಮಾಡಿಕೊಂಡು ಪ್ರಾಣಲಿಂಗ ಪೂಜೆಯ ನೆಸಗಬಲ್ಲ ಶಿವಶರಣಂಗೆ ಕಾಯ ಜೀವ ಸಂಸ್ಕೃತಿಯ ಸಂಪರ್ಕದ ಕೂಟವಾದ ಕಡೆಯಣಾದೆಂಬುದೀಗ – ಆ ಚೆಂಗಣಗಿಲ ಕಮಲವ ಕೊಯ್ದು ಶಿವಲಿಂಗಪೂಜೆಯ ಮಾಡಬಲ್ಲ ಶರಣಂಗೆ ಸಂಸಾರ ಸಂಗದ ಹೊದ್ದಿಗೆಯೆಂದೇನು ಹೇಳಾ ಎಂಬುದರರ್ಥ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾ ಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅಂಜೆನು ಅಳುಕೆನು ಉರಿಸಿರಿಗೆ ಸೊರಗೆನು
ಬರುವುದೆಲ್ಲವ ಸಹಿಪೆನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಿನ್ನಪವನವಧಾರು ಚೆನ್ನ ಶ್ರೀ ಲಿಂಗವೆ
ನಿನ್ನ ಲೀಲೆಯನರಿಯೆ ಚರಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಡಿದೆನೆಂಬುದು ಒಳಗಿನಗರುವವು
ಮಾಡುವೆನೆಂಬುದು ಮುಂಗರುವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀ ಕೊಟ್ಟ ಭಾಗ್ಯವ ನಿನ್ನ ಚರಣಕೆ ಸಲಿಪೆ
ನೀ ಕೊಟ್ಟ ಈ ಮನವ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಂಟುಗುರುವಲ್ಲವಾದೆ ರಕ್ತಗುರುವಲ್ಲವಾದೆ
ವೀರವಿರಕ್ತಿಗೆ ಹೆಸರಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನಿರೆ ಮನೆಯೊಳಗೆ ನೀನಿರೆ ಮಠದೊಳಗೆ
ನೀನಿರೆ ಮನದೊಳು ಪರಿಣಾಮ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿಲೆಯ ಶಿಲ್ಪವಗೈವ ಮೊಗ್ಗು ಹೂವಾಗಿಸುವ
ಮೃಗವ ಮಾನವನಾಗಿ ರೂಪಿಸುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಮಚಿತ್ತನಾಗಿರಿಸು ಶಿವಚಿತ್ತನಾಗಿರಿಸು
ವಿಮಲಪಾವನ ಚಿತ್ತನಾಗಿರಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಿಲಕ ಗುರುಕುಲಕಾದೆ ಪದಕ ದಾಸೋಹಕೆ
ಚೀಲಕ ಕೈಲಾಸ ಲೋಕಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿ ಕಲಿಸಿದೆ ತಂದೆ ನಡೆ ಕಲಿಸಿದೆ ತಂದೆ
ಉಣ ಕಲಿಸಿದೆ ತಂದೆ ಉಡುವುದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಒಳದನಿ

**ಮೊ**ನ್ನೆ ಏಪ್ರಿಲ್ ಒಂದು. ನಮಗೆ ನೂರು ತುಂಬಿದ ಸಂದರ್ಭ. ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಮತ್ತು ಹಿತೈಷಿಗಳು ಸಡಗರ ಸಂತಸದಲ್ಲಿ ಶ್ರೀಮಠವನ್ನು ಕಲರವಗೊಳಿಸಿದ ದೃಶ್ಯಭವ್ಯ. ಶ್ರೀ ಸಂಸ್ಥೆಯ ಸೇವಾ ಕಮ್ಮಟದಲ್ಲಿ ನಾವು ಸಲ್ಲಿಸುತ್ತ ಬಂದ ಕಿಂಚಿತ್ ಸೇವೆಯ ಗುಣಗಾನ, ಪ್ರಶಂಸೆಗಳ ಸುರಿಮಳೆ. ಹಾರ ತುರಾಯಿಗಳ ಸಮರ್ಪಣೆ, ಗಣ್ಯಮಾನ್ಯರ ಆಗಮನ. ಉದಾತ್ತ ಮನಸ್ಕರಿಂದ ದಾಸೋಹ ಸೇವೆ. ಎಲ್ಲವನ್ನೂ ನೋಡುತ್ತಿರುವಾಗ ಒಳದನಿಯ ಮೆಲುಮಾತಿನ ಹಿತನುಡಿ. 'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ, ಮಾಡಿದೆನೆನ್ನದಿರು' ಎಂಬ ಬಸವಣ್ಣನವರ ಹಿತವಾದ ಎಚ್ಚರದ ಮೃದುನುಡಿ.

ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ಎ.ಎಸ್. ಪಾಟೀಲ(ನಡಹಳ್ಳಿ) ಈಗ ದೊಡ್ಡ ಉದ್ಯಮಿ. ಮನಸ್ಸು ದೊಡ್ಡದು. 'ನೀಡಿದಣಿಯದ' ಪ್ರವೃತ್ತಿ ಆತನದು. ಭಾರಿ ಬೆಲೆಯ ಕಾರೊಂದನ್ನು ಅರ್ಪಿಸಿ ಆನಂದಮುಗ್ಧವಾದ. ಅರ್ಪಣೆಯನ್ನು ಬಹಿರಂಗಗೊಳಿಸಬಾರದೆಂಬ ಬಿನ್ನಹ ಬೇರೆ. ಸುಸಂಸ್ಕೃತ ಜೀವನ ಶೈಲಿ. 'ಇಳೆ ನಿಮ್ಮದಾನ ಬೆಳೆ ನಿಮ್ಮದಾನ' ವೆಂಬ ದಾಸಿಮಾರ್ಯರ 'ಶಿವಪಥ'ದಲ್ಲಿ ನಡೆಯುವ ಮನೋಭಾವ. ಶ್ರೀಮಠದ ಪ್ರಸಾದಸವಿದು ಅರಳಿದ ವಿನಮ್ರತೆ ಪಾಟೀಲನದು. ಧನ್ಯತೆ ಆತನದಾಯಿತು. ಆದರೆ ನಮಗೆ ಸಂಕೋಚ. ಬೆಲೆ ಬಾಳುವ ಕಾರಿನ ಅಗತ್ಯ ನಮಗಿರಲಿಲ್ಲ. ಈಗಲೂ ಇಲ್ಲ. ಅಷ್ಟೊಂದು ಹಣ ವ್ಯಯಮಾಡಿ ಅರ್ಪಿಸುವ ಮನಸ್ಸು ಶ್ರೀ ಪಾಟೀಲರಿಗೇಕಾಯಿತೋ ತಿಳಿಯದು. ಭಕ್ತರು ಅರ್ಪಿಸಿದರಾದರೂ ಲೋಕ ಏನೆಂದು ಕೊಂಡೀತು ಎಂಬುದೇ ನಮ್ಮ ಒಳದನಿ. ಎಲ್ಲವೂ ಶಿವಾರ್ಪಿತವೆಂದೇ ಸ್ವೀಕರಿಸಿದ್ದಾಯಿತು.

☆

# ಯುಗಾದಿ

ಯುಗಾದಿಯ ಶುಭಾಶಯಗಳು – 'ಸಿದ್ಧಗಂಗಾ'ದ ಎಲ್ಲರಿಗೆ. ಹಬ್ಬ ಬಂದಿದೆ. ಹರುಷ ತಂದಿದೆ. ಬೇವು-ಬೆಲ್ಲವ ಬೆರೆಸಿ ನೀಡಿದೆ. ಕಳೆದ ಯುಗಾದಿಯಿಂದ ಈ ಯುಗಾದಿಯವರೆಗೆ ಆಗಿ ಹೋದ ಘಟನೆಗಳನ್ನು ಮೆಲುಕು ಹಾಕಿದಾಗ ಬೆಲ್ಲಕ್ಕಿಂತ ಬೇವೇ ಹೆಚ್ಚು ಎನ್ನಬೇಕು. ಇನ್ನು ಚುನಾವಣೆಗಳು ಬಂದಿವೆ. ಸೇವೆಯ ಸೋಗಿನಲ್ಲಿ ಸ್ವಾರ್ಥದ ಜಾತ್ರೆ ವಿಜೃಂಭಿಸುತ್ತಿದೆ. 'ಅಂತಃಸಾಕ್ಷಿ ಶೂನ್ಯ' ನುಡಿಗಳ ಒಡೆಯರು ನಡೆದು ಬರುತ್ತಿದ್ದಾರೆ. ಸುಳ್ಳಿನಸರಮಾಲಾಂಕೃತರಾಗಿ ರಾಜ್ಯ ಸುತ್ತುತ್ತಿದ್ದಾರೆ. ಅಮಾಯಕ ಜನತೆಯನ್ನು ಪಾಪದ ಔತಣಕ್ಕೆ ಸ್ವಾಗತಿಸುತ್ತಿದ್ದಾರೆ. ವೇದಿಕೆಯಿಂದ ನೀತಿ ನೀಲಾಂಜನವನ್ನು ಬೆಳಗಿಸುವ ಇವರು ಪ್ರಜೆಗಳಿಗೆ ಪಾಪರೂಪದ ಹಣ, ಹೆಂಡ, ಸೀರೆ, ಅಕ್ಕಿ, ಬೇಳೆಗಳ ಆಮಿಷದ ವಿಷವನ್ನುಣಿಸ ಹೊರಟಿದ್ದಾರೆ. ಮತದಾರನೀಗ ವಿವೇಕವಂತನಾಗದೇ ಹೋದರೆ ಮುಂದಿದೆ ಘೋರ ದುರಂತ. ಯಾರೇ ಆಗಲೀ, ಯಾವ ಪಕ್ಷದವರೇ ಆಗಲೀ, ಅವರ ಜಾತಿ, ಕುಲ, ಕೋಮು, ಒಳಪಂಗಡ, ಭಾಷೆ, ಬಂಧು-ವೆನ್ನದೆ ಆದಷ್ಟೂ ಸಜ್ಜನನನ್ನು, ಪ್ರಾಮಾಣಿಕನನ್ನು, ಸೇವಾಶೀಲನನ್ನು, 'ಇವನಾರವನೆನ್ನದೆ' 'ಇವ ಒಳ-ಹೊರಗು ಶುದ್ಧ' ಕೈ ಬಾಯಿ ಶುದ್ಧ. ಹೃದಯ ಶುದ್ಧಿಯವ ಎಂಬುದನ್ನು ಪರೀಕ್ಷಿಸಿ ಮತ ನೀಡಿದರೆ ಮುಂದಿದೆ ಕಲ್ಯಾಣ ರಾಜ್ಯ. ಇಲ್ಲದೇ ಹೋದರೆ ಸ್ಪರ್ಧಿಗಳು ಕೊಟ್ಟ ಧನ-ಧಾನ್ಯ-ಮದ್ಯಗಳಿಂದ ಭ್ರಷ್ಟರಾದದ್ದೇ ಆದರೆ ಪ್ರಜೆ ತನ್ನ ಭವಿಷ್ಯಕ್ಕೆ ತಾನೇ ಮುಳುವಾಗುವುದರಲ್ಲಿ ಎರಡು ಮಾತಿಲ್ಲ.

ಇನ್ನು, ಸಿದ್ಧಗಂಗಾ ಶ್ರೀಗಳವರನ್ನು ಕಾಣಲು, ಆಶೀರ್ವಾದ ಪಡೆಯಲು ಎಲ್ಲರೂ, ಎಲ್ಲ ಪಕ್ಷದ ಅಭ್ಯರ್ಥಿಗಳೂ, ಬೆಂಬಲಿಗರೂ ಬರುತ್ತಿದ್ದಾರೆ. ಪರಮಪೂಜ್ಯರು ಎಲ್ಲರಿಗೂ ದರ್ಶನ ಕೊಡುತ್ತಿದ್ದಾರೆ. ಆಶೀರ್ವಾದ ಮಾಡುತ್ತಿದ್ದಾರೆ. ಆದರೆ ಇಂಥವರಿಗೇ ಬೆಂಬಲಿಸಿ, ಇಂಥ ಪಕ್ಷವನ್ನೇ ಕೈ ಹಿಡಿಯಿರಿ ಎಂದು ಯಾರಿಗೂ ಎಂದೂ ಹೇಳಿದವರಲ್ಲ. ಅವರು ಹೇಳುವುದೊಂದೇ ಮಾತು 'ಪಾಪ ಮಾಡಬೇಡಿ, ಉತ್ತಮರನ್ನು ಆಯ್ಕೆ ಮಾಡುವ ಸದ್ಬುದ್ಧಿಯನ್ನು ದೇವರು ನಿಮಗೆ ಕೊಡಲಿ' ಎಂದಷ್ಟೇ ಹೇಳುವುದು. ಹೀಗಿರುವಾಗ ಜನ ಶ್ರೀಗಳವರು ಆ ಪಕ್ಷ, ಇಂಥವರ ಪರ ಎಂದಾಡಿಕೊಳ್ಳು ವುದು ಅವಿವೇಕವಾಗುತ್ತದೆ. ನಿದ್ದೆ ಎಚ್ಚರಗಳಲಿ ಶ್ರೀಗಳವರ ಚಿಂತೆಯೊಂದೇ ರಾಷ್ಟ್ರ ಅನೈತಿಕದತ್ತ ನಡೆಯುತ್ತಲಿದೆಯಲ್ಲಾ? ಸರಿಮಾಡುವುದೆಂತು? ಮತ್ತೊಮ್ಮೆ ಮಹಾತ್ಮಗಾಂಧೀಜಿಯವರು ಹುಟ್ಟಿ ಬರಬಾರದೇ? ಎಂಬುದಾಗಿದೆ.

ಪ್ರಜೆಯೆಂಬ ಪ್ರಭು ಪ್ರಜ್ಞಾಶೂನ್ಯನಾಗಬಾರದು. ಉಪ್ಪು ತನ್ನ ಗುಣವನ್ನು ಕಳೆದುಕೊಂಡರೆ ಮಾಡುವುದಾದರೂ ಏನು? ಮುಂಬರುವ ಚುನಾವಣೆಯಲ್ಲಿ ಮತದಾರ ಮತಿವಂತನಾಗಿ ನಡೆದು ಕೊಳ್ಳುವಂತಾಗಲಿ ಎಂದು 'ಸಿದ್ಧಗಂಗಾ' ಆಶಿಸುತ್ತದೆ.

– ಸಂಪಾದಕ





# ಶೂನ್ಯಪೀಠದ ಪ್ರಭು ಅಲ್ಲಮಪ್ರಭು

-ಯೋಗೀಶ್ ನಿರ್ವಿಕಲ್ಪ, ಬಿನ್ ಎಸ್. ವಾಸುದೇವ್, ಕುಚಲಕ್ಕಿ ಕೇರಿ, ಬಿ.ಹೆಚ್.ರಸ್ತೆ, ಶಿವಮೊಗ್ಗ -೨

**(ಏಪ್ರಿಲ್ 7 ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ನೈಜ ಪ್ರಜಾಸತ್ತೆಯ ಮೂಲ ತತ್ವಗಳಿಗೆ ಜೀವಂತಿಕೆ ತುಂಬಿದ ಬಸವಾದಿ ಶರಣ ಪರಂಪರೆಯ ಅನುಭವ ಮಂಟಪದ ಶೂನ್ಯ ಪೀಠಾಧ್ಯಕ್ಷರಾದ ಅಲ್ಲಮಪ್ರಭುದೇವರ ಜಯಂತಿ ಈ ನಿಮಿತ್ತ ಈ ಲೇಖನ)**

*ಹೊನ್ನು ಮಾಯೆ ಎಂಬರು ಹೊನ್ನು ಮಾಯೆಯಲ್ಲ*
*ಹೆಣ್ಣು ಮಾಯೆ ಎಂಬರು ಹೆಣ್ಣು ಮಾಯೆಯಲ್ಲ*
*ಮಣ್ಣು ಮಾಯೆ ಎಂಬರು ಮಣ್ಣು ಮಾಯೆಯಲ್ಲ*
*ಮನದ ಮುಂದಣ ಆಸೆಯೆ ಮಾಯೆ ಕಾಣಾ*
*ಗುಹೇಶ್ವರ*

ಹೊನ್ನು ಹೆಣ್ಣು ಮಣ್ಣುಗಳು ಮಾಯೆಯಲ್ಲ! ಹೊರ ಪ್ರಪಂಚದ ವಸ್ತುಗಳು ಮಾಯೆಯಲ್ಲ ! ಅದು ಬೇಕು ಬೇಕೆಂದು ಕಾಡುವ ಮನದೊಳಗಿನ ಆಸೆಯೆ ಮಾಯೆ ಯಾಗಿದೆ. ಹೊರ ಪ್ರಪಂಚದ ವಸ್ತು ವಿಷಯಗಳಲ್ಲಿಯೆ ಸುಖವಿದೆಯೆಂದು ಭಾವಿಸಿರುವ ಮನದ ಅಜ್ಞಾನವೇ ಮಾಯೆ ಯಾಗಿದ್ದು ಯಾವ ಕಾರಣಕ್ಕೂ ಯಾವುದೇ ವಸ್ತು ವಿಷಯಗಳಿಂದ ಮನಸ್ಸು ವಿಚಲಿತಗೊಳ್ಳದೆ ಶಾಂತ ಚಿತ್ತದಿಂದ ಕೂಡಿರಬೇಕು. ಅಂತಹ ಶಾಂತಚಿತ್ತ ಪಡೆಯಲು ಮನದೊಳಗಿನ ಆಸೆಯನ್ನು ತ್ಯಜಿಸಿ ಜ್ಞಾನದತ್ತ ಒಲವು ಬೆಳೆಸಿಕೊಳ್ಳಬೇಕೆಂದು ತಿಳಿಸಿದವರೆ ಜ್ಞಾನವೈರಾಗ್ಯ ತತ್ವದ ಆದಮ್ಯ ಚೇತನ ಅಲ್ಲಮಪ್ರಭುದೇವರು.

ಸರ್ವಸಮಾನತೆಯ ತತ್ವದ ಆದರ್ಶಪೂರ್ಣ ಸಮಾಜ ವನ್ನು ಕ್ರಿಯಾತ್ಮಕವಾಗಿ ರೂಪಿಸಿದವರು 12ನೇ ಶತಮಾನದ ಶಕಪುರುಷ ಸಂತ ಬಸವಣ್ಣನವರು. ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ನೈಜ ಪ್ರಜಾಸತ್ತೆಯ ಮೌಲ್ಯಗಳ ಮೂಲಸೂತ್ರವನ್ನು ಜಗತ್ತಿಗೆ ನೀಡಿದ ಗುರು ಬಸವಣ್ಣನವರು 'ಅನುಭವ ಮಂಟಪ' ದ ಮೂಲಕ ಆ ತತ್ವಗಳಿಗೆ ಜೀವಂತಿಕೆ ತಂದವರು. ಇಡೀ ಜಗತ್ತಿಗೆ ಆದರ್ಶ ಪ್ರಾಯವಾಗಿ ಕಂಗೊಳಿಸಿದಂತಹ ಆ ವೈಚಾರಿಕ ತತ್ವ ಆಧಾರದ ಅನುಭವ ಮಂಟಪದ ಪ್ರಥಮ ಅಧ್ಯಕ್ಷರಾಗಿ ಮಾನವ ಸಮಾಜದ ಸರ್ವಾಂಗೀಣಾ ಭಿವೃದ್ಧಿಗೆ ಚಾಲನೆ ನೀಡಿದವರು ಅಲ್ಲಮಪ್ರಭುದೇವರು. ಅವರು ಜ್ಞಾನ ವೈರಾಗ್ಯ ತತ್ವ ಮೌಲ್ಯಗಳಿಗೆ ಸಾಕ್ಷಿಯಾಗಿ ನೆಲೆ ನಿಂತವರು.

ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವಿಯ ಸಾತ್ವಿಕ ದಂಪತಿಗಳಾದ ನಿರಹಂಕಾರಿ ಮತ್ತು ಸುಜ್ಞಾನಿ ದೇವಿಯರ ಪುತ್ರರಾಗಿ ಅಲ್ಲಮರು ಜನಿಸಿದರು. ಬಾಲ್ಯ ದಿಂದಲೂ ಆಧ್ಯಾತ್ಮ ವಿಚಾರಗಳತ್ತ ಹೆಚ್ಚಿನ ಒಲವು ಬೆಳೆಸಿ ಕೊಂಡಿದ್ದ ಅಲ್ಲಮರು ಮದ್ದಳೆ ಬಾರಿಸುವ ಕಾಯಕದಲ್ಲಿ ಹೆಚ್ಚಿನ ಪರಿಣಿತಿ ಪಡೆದವರಾಗಿದ್ದರು. ಅಲ್ಲಮರ ಆಧ್ಯಾತ್ಮ ಜೀವನ ಸಾಧನೆಯ ದಿನಗಳಲ್ಲಿ ಮಾಯಾದೇವಿ ಎಂಬ ಸ್ತ್ರೀ ಅವರ ಜೀವನ ಸಂಗಾತಿ ಆಗಬಯಸುವ ಕೋರಿಕೆ ಯನ್ನು ಅವರ ಮುಂದಿಟ್ಟಾಗ ಅದನ್ನು ತಿರಸ್ಕರಿಸಿದ ಅಲ್ಲಮರು ಜ್ಞಾನ ಸಂಪಾದನೆಯನ್ನೇ ಏಕಮಾತ್ರ ಗುರಿ ಯನ್ನಾಗಿಸಿಕೊಂಡು ಅದರ ಸಾಫಲ್ಯತೆಗಾಗಿ ಲೋಕಸಂಚಾರಿಯಾದರು.

ಅಲ್ಲಮರು ತಮ್ಮ ಅಗಾಧ ತಪೋಶಕ್ತಿಯಿಂದ ಆಧ್ಯಾತ್ಮ ತತ್ವಗಳ ಸೂಕ್ಷ್ಮತೆಯ ಅರಿವು ಪಡೆದು ಅಪ್ರತಿಮ ಅನುಭಾವಿ ಪ್ರಭುದೇವರಾದರು. ಅಲ್ಲಮರು ತನ್ನಷ್ಟಕ್ಕೆ ತಾವು ಎಲ್ಲಿಯೋ ಗುಹಾ ವಾಸಿಯಾಗಿರಲು ಬಯಸದೆ ಲೋಕದ ಇತರೆ ಸಾಧಕರ ಹಾಗೂ ಜನಸಾಮಾನ್ಯರ ಬಗ್ಗೆ ಕಾಳಜಿ ವಹಿಸಿ ಅವರುಗಳ ಉದ್ಧಾರಕ್ಕಾಗಿ ಕಾರ್ಯ ಯೋಜನೆಗಳನ್ನು ಹಾಕಿಕೊಂಡು ಕಾರ್ಯಮಗ್ನರಾದರು. ಜನಸಾಮಾನ್ಯರು ಭಕ್ತಿಯ ನಿಜಸ್ಥಲವನ್ನು ಅರಿಯದೆ ಮೌಢ್ಯತೆಗಳಿಗೆ ದಾಸರಾದುದನ್ನು ಕಂಡು ಅಲ್ಲಮರು

*ಹಾಲ ನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ*
*ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ*
*ಅಗ್ಗವಣೆಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ*
*ಪುಷ್ಪದ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವ*
*ಇವು ಷಡುಸ್ಥಲಕ್ಕೆ ಹೊರಗೂ, ನಿಜಭಕ್ತಿಯಿಲ್ಲದವರ ಕಂಡಡೆ*
*ಮೆಚ್ಚನು ಗುಹೇಶ್ವರನು ಎಂದು ತಿಳಿಸುತ್ತಾರೆ.*

ದೇವರ ಸಾಕ್ಷಾತ್ಕಾರದ ಭಕ್ತಿಗಾಗಿ ಇಂತಹ ನೀರೇ ಬೇಕು, ಇಂತಹ ಹೂವು ಬೇಕೆಂದು ಪರಿತಪಿಸುತ್ತಾ ಅಲೆದಾಡಿ ಮನೋಶಕ್ತಿಯನ್ನು ಅನಾವಶ್ಯಕವಾಗಿ ಹಾಳು ಮಾಡಿಕೊಳ್ಳು ವುದರಬದಲು ನಮ್ಮಲ್ಲಿರುವಂತಹ ಶುದ್ಧ ಜಲ, ಹೂವು ಗಳನ್ನೇ ಪರಿಪೂರ್ಣ ಶರಣಾಗತಿಯ

ನಿಜಭಕ್ತಿಯ ರಸವನ್ನು ಬೆರೆಸಿ ಪರಮಾತ್ಮನಿಗೆ ಅರ್ಪಿಸಿದರೆ ಅದು ಪರಮಾತ್ಮನಿಗೆ ಸಲ್ಲುತ್ತದೆ ಎಂದು ಹೇಳುವ ಅಲ್ಲಮರು ನಮ್ಮ ಪೂಜೆ ಪ್ರಾರ್ಥನೆ ಜಪಗಳಿಂದ ಮನಸ್ಸು ಶುದ್ಧವಾಗಬೇಕು ಹಾಗೂ ವಿಕಾಸಗೊಳ್ಳಬೇಕೆಂದು ಅಭಿಪ್ರಾಯಪಡುತ್ತಾರೆ.

*ಮದ್ಯ ಮಾಂಸಾದಿಗಳ ಮುಟ್ಟೆವೆಂದೆಂಬಿರಿ ನೀವು ಕೇಳಿರಿ*
*ಮದ್ಯವಲ್ಲವೇನು ಅಷ್ಟಮದಂಗಳು ?*
*ಮಾಂಸವಲ್ಲವೇನು ಸಂಸಾರ ಸಂಗ ?*
*ಈ ಉಭಯವನತಿಗಳದಾತನೆ ಗುಹೇಶ್ವರ ಲಿಂಗದಲ್ಲಿ*
*ಲಿಂಗೈಕ್ಯನು.*

ಯಾವ ರೀತಿ ಮದ್ಯ ಮಾಂಸಾದಿಗಳು ಮನದ ತಮೋವೃತ್ತಿಗೆ ಕಾರಣವಾಗುತ್ತದೆಯೋ ಹಾಗೆಯೇ ಅಷ್ಟ ಮದಗಳು ಮತ್ತು ಸಂಸಾರ(ಇಂದ್ರಿಯ ವೃತ್ತಿಗಳ) ಸಂಗ ಸಹ ಮನದ ವಿಕಾರಕ್ಕೆ ಕಾರಣವಾಗಿ ಜೀವನದ ಅವನತಿಗೆ ಕಾರಣವಾಗುತ್ತದೆಂದು ಎಚ್ಚರಿಸುವ ಅಲ್ಲಮರು ಯಾರು ಮನದೊಳಗೆ ಅಷ್ಟಮದ ಮತ್ತು ಸಂಸಾರ ಸಂಗದ ಅಂಟು ಅಂಟಿಸಿಕೊಂಡಿರುವವರು ಅವರೂ ಸಹ ಸ್ಥೂಲವಾಗಿ ಮದ್ಯ ಮಾಂಸಾದಿಗಳನ್ನು ಸೇವಿಸದಿದ್ದರೂ ಸೂಕ್ಷ್ಮವಾಗಿ ಸೇವಿಸಿದಂತೆ ಎಂದು ತಿಳಿಸುತ್ತಾರೆ. ಸಾತ್ವಿಕ ಶರಣ ಭಕ್ತನಾದವನು ಈ ಸ್ಥೂಲ ಸೂಕ್ಷ್ಮಗಳೆರಡರಿಂದಲೂ ಮುಕ್ತನಾಗಿರಬೇಕೆನ್ನುತ್ತಾರೆ.

ವಿಷಯ ಪ್ರಪಂಚದ ವಾಸನೆಗಳತ್ತಲೇ ಸುಳಿದಾಡುವ ಮನುಷ್ಯನ ಇಂದ್ರಿಯ ದೌರ್ಬಲ್ಯಗಳನ್ನು ಕಂಡು ಅಲ್ಲಮರು

*ಸಂಸಾರವೆಂಬ ಹೆಣ ಬಿದ್ದಿದ್ದಡೆ, ತಿನಬಂದ ನಾಯಿ*
*ಜಗಳವ ನೋಡಿರೆ*
*ನಾಯಿ ಜಗಳವ ನೋಡಿ ಹೆಣ(ನೆದ್ದು) ನಗುತ್ತಿದೆ*
*ಗುಹೇಶ್ವರನೆಂಬ ಲಿಂಗವಲ್ಲಿಲ್ಲ ಕಾಣಿರಿ*

ಎಂದು ಒಗಟಾಗಿ ನುಡಿದು

*ಹೇಮ ನಿನ್ನದಲ್ಲ; ಭೂಮಿ ನಿನ್ನದಲ್ಲ ;*
*ಕಾಮಿನಿ ನಿನ್ನವಳಲ್ಲ ಇದು ಜಗಕಿಕ್ಕಿದ ವಿಧಿ*
*ನಿನ್ನ ಒಡವೆಯೆಂಬುದು ಜ್ಞಾನರತ್ನ !*
*ಅಂತಪ್ಪ ಜ್ಞಾನರತ್ನವ ಕೆಡೆಗುಡದೆ ನೀನಲಂಕರಿಸಿದೆಯಾದಡೆ*
*ನಮ್ಮ ಗುಹೇಶ್ವರ ಲಿಂಗದಲ್ಲಿ ನಿನ್ನಿಂದ*
*ಬಿಟ್ಟುಸಿರಿವಂತರಿಲ್ಲ ಕಾಣಾ ಎಲೆ ಮನವೆ*

ಎಂದು ಹೇಳಿ ಸತ್ಯತೆಯ ಅರಿವು ಮೂಡಿಸುತ್ತಾರೆ.

ಭಾವುಕವಲ್ಲದ ವೈಚಾರಿಕ ದೃಷ್ಟಿವುಳ್ಳವರಾಗಿದ್ದ ಅಲ್ಲಮರು ಆಚರಣೆಗಳು ವಿಚಾರಶೀಲತೆಯನ್ನು ಎಂದೂ ಕಳೆದುಕೊಳ್ಳಬಾರದೆಂಬ ನಿಶ್ಚಲ ಅಭಿಪ್ರಾಯ ಅವರದಾಗಿತ್ತು. ಜ್ಞಾನಸಾಧಕರಾದ ಗೊಗ್ಗಯ್ಯ, ಮುಕ್ತಾಯಕ್ಕ, ಸಿದ್ಧರಾಮ, ಗೋರಕ್ಷ ಮುಂತಾದವರುಗಳಿಗೆ ಅಲ್ಲಮರು ಜ್ಞಾನ ಬೆಳಕನ್ನು ತೋರಿ ಮುನ್ನಡೆಸಿದವರು. ಗುರು ಬಸವಣ್ಣನವರ ಶಿಷ್ಯರಾದ ಅನಿಮಿಷ ದೇವರ ಬಳಿ ಇದ್ದ ಇಷ್ಟಲಿಂಗವನ್ನು ಪಡೆದ ಅಲ್ಲಮರು ಸಿದ್ಧರಾಮೇಶ್ವರರ ಒಡಗೂಡಿ ಕಲ್ಯಾಣಕ್ಕೆ ಬಂದು ಇಷ್ಟಲಿಂಗದ ಮಹತ್ವವನ್ನು ಚಿನ್ಮಯಜ್ಞಾನಿ ಚನ್ನಬಸವಣ್ಣನಿಂದ ಪಡೆಯುತ್ತಾರೆ. ಪ್ರಜಾಸತ್ತೆಯ ಮೌಲ್ಯ ಮತ್ತು ಜ್ಞಾನ ಪಸರಿಸುವ ದಿಟ್ಟ ಉದ್ದೇಶ ಹೊಂದಿದ್ದ ಶೂನ್ಯ ಪೀಠಕ್ಕೆ ಅಲ್ಲಮಪ್ರಭುಗಳನ್ನು ಪ್ರಥಮ ಪೀಠಾಧ್ಯಕ್ಷರನ್ನಾಗಿ ಗುರುಬಸವಣ್ಣನವರು ಆಯ್ಕೆ ಮಾಡಿ ಸಮಾಜದೊಳಗೆ ಭಕ್ತಿ ಜ್ಞಾನದ ಅಮೃತವಾಹಿನಿ ಹರಿಯಲು ಕಾರಣರಾಗುತ್ತಾರೆ.

ಪ್ರತಿಯೊಂದನ್ನು ಪರಿಪೂರ್ಣವಾಗಿ ಪರೀಕ್ಷಿಸಿ ಒಪ್ಪಿಕೊಳ್ಳುವ ವ್ಯಕ್ತಿತ್ವದ ಅಲ್ಲಮರು ಶೂನ್ಯ ಪೀಠಾಧ್ಯಕ್ಷರಾಗಿ ಜನಮನದ ಅಂಧಕಾರ ಕಳೆದು ಜ್ಞಾನ ವಿಕಾಸಕ್ಕೆ ಕಾರಣರಾದವರು. ಪರಮಾತ್ಮನ ಸಾಕ್ಷಾತ್ಕಾರ ಪಡೆಯುವ ಹಂಬಲದಿಂದ ಬಂದಿದ್ದ ಶರಣೆ ಅಕ್ಕಮಹಾದೇವಿಯರನ್ನು ಅನುಭವ ಮಂಟಪದಲ್ಲಿ ಅಲ್ಲಮರು ಪ್ರಶ್ನಿಸಿದ್ದು ಹಾಗೂ ಅವುಗಳಿಗೆ ಅಕ್ಕ ಕೊಟ್ಟ ಉತ್ತರಗಳು ಆಧ್ಯಾತ್ಮಶಾಸ್ತ್ರ, ಸಂಹಿತೆಗೆ ಬೇಕಾದ ಅಪೂರ್ವ ಮಹತ್ವಪೂರ್ಣ ಸಂಗತಿಗಳನ್ನು ಒದಗಿಸುತ್ತದೆ. ಆಧ್ಯಾತ್ಮದ ಔನತ್ಯಕ್ಕೆ ಮನದ ವೈರಾಗ್ಯ ಪ್ರಮುಖ ಸಾಧನವೆನ್ನುವ ಅಲ್ಲಮರು ಈ ಸೃಷ್ಟಿಯೊಳಗೆ ಕ್ರಿಯಾತ್ಮಕವಾಗಿರುವ ಪರಮಾತ್ಮ ಶಕ್ತಿಯೆ ಎಲ್ಲರೊಳಗಿದ್ದು ಅದನ್ನು ದರ್ಶಿಸುವುದರತ್ತ ನಮ್ಮ ಗಮನ ಕೇಂದ್ರೀಕೃತಗೊಳ್ಳಬೇಕೆಂದು ತಿಳಿಸುತ್ತಾರೆ.

*ಬಯಲು ಬಯಲನೇ ಬಿತ್ತಿ ಬಯಲು ಬಯಲನೇ ಬೆಳೆದು*
*ಬಯಲು ಬಯಲಾಗಿ ಬಯಲಾಯಿತ್ತಯ್ಯ*
*ಬಯಲು ಜೀವನ ಬಯಲು ಭಾವನೆ*
*ಬಯಲು ಬಯಲಾಗಿ ಬಯಲಾಯಿತ್ತಯ್ಯ*
*ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು*
*ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ*

ಆಧ್ಯಾತ್ಮತತ್ವ ಪರಿಪೂರ್ಣತೆಯ ಬಯಲು ಆನಂದದ ಕ್ಷಣಗಳನ್ನು ಶ್ರೀಶೈಲದಲ್ಲಿ ಕಳೆದ ಅಲ್ಲಮರು ಮನದ ನಿರ್ಮುಕ್ತತೆಯ ಬಯಲು ಆನಂದದಲ್ಲಿ ಒಂದಾದರು. *





## ಅನುಭಾವಿ ಅಕ್ಕ

-ಶಕುಂತಲ ಯು. ಜ್ಯೋತಿರ್ಲಿಂಗ, ಒಂದನೇ ತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ-೫೭೭ ೨೧೭.

*'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ*
*ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ*
*ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ*
*ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನಸಂಗಮದೇವಾ*
*ಮಹಾದೇವಿಯಕ್ಕನ ಒಂದು ವಚನ ನಿರ್ವಚನ'*

ಎಂದು ಚೆನ್ನಬಸವಣ್ಣನವರು ಕೊಂಡಾಡಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಹಲವು ವಚನಕಾರರು ಕನ್ನಡ ನುಡಿಯನ್ನು ಬೆಳಗಿಸಿದರು. ಜ್ಞಾನದ ಖಣಿಯಾಗಿ ಅಲ್ಲಮಪ್ರಭು, ಭಕ್ತಿ ಭಂಡಾರಿ ಬಸವಣ್ಣನವರು. ಕರ್ಮಯೋಗಿ ಸಿದ್ಧರಾಮ, ವೈರಾಗ್ಯನಿಧಿ ಅಕ್ಕಮಹಾದೇವಿ ಹೀಗೆ ಹಲವಾರು ಶರಣರ ವಚನಗಳು ಸದಾ ಹಸಿರಾಗಿರುತ್ತವೆ.

ಅಕ್ಕ ಕನ್ನಡ ಸಾಂಸ್ಕೃತಿಕ ಚರಿತ್ರೆ ಕಂಡ ಮೊದಲ ದಾರ್ಶನಿಕಳು. ಸಾಹಿತ್ಯ ಚರಿತ್ರೆ ಕಂಡ ಮೊದಲ ಕವಯಿತ್ರಿ. ಆಧ್ಯಾತ್ಮಲೋಕದ ಅನುಭಾವಿನಿ. ಸಂಸಾರದಿಂದ ವಿರಾಗಿನಿ. ಬಾಲ್ಯದಿಂದಲೇ ಅಕ್ಕ ಕನಸುಗಾರ್ತಿ. ಆ ಕನಸು ನಲ್ಲನಿಗೆ ಸಂಬಂಧಿಸಿದ್ದರೂ ಲೌಕಿಕವಲ್ಲ ಅನುಭಾವಿಕ. ಅವಳ ಅನ್ವೇಷಣೆಯೇ ಅನುಭಾವಿಕವಾದದ್ದು. ಅನುಭವದ ಜಗತ್ತಿನಿಂದ ಆಧ್ಯಾತ್ಮಿಕ ಜಗತ್ತಿನ ಅನುಭಾವಕ್ಕೆ ಸಾಗಿದವಳು ಅಕ್ಕಮಹಾದೇವಿ. ಬಾಲ್ಯದಿಂದಲೇ ತನಗರಿವು ಇಲ್ಲದಂತೆ ಪರಶಿವನೇ ತನ್ನ ಪತಿ ತಾನು ಅವನ ಸತಿ ಎಂಬ ಅಚಲ ಭಾವನೆ ಹೊಂದಿದ್ದಳು. ಬಸವಣ್ಣನವರ ಕ್ರಾಂತಿಯುತ ಆಧ್ಯಾತ್ಮ ವಿಚಾರಗಳಿಗೆ ಪ್ರಭಾವಿತಳಾದವಳು. ಉಡುತಡಿಯ ಮಠದಲ್ಲಿಯ ಅನುಭಾವ ಗೋಷ್ಠಿ ಚಿಂತನ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಳು. ಭವಬಂಧನವ ದಾಟಿ ಪರಮಸುಖ ಕಂಡುಕೊಳ್ಳುವ ಮಾರ್ಗದತ್ತ ಅವಳ ಮನಸ್ಸು ಸದಾ ತುಡಿಯುತ್ತಿತ್ತು.

ಒಂದು ಸಲ ಅವಳ ಗೆಳತಿಯರೆಲ್ಲ ಸೇರಿ ಮದುವೆಯಾಗುವ ಭಾಗ್ಯಶಾಲಿ ಯಾರು ಎಂದು ಛೇಡಿಸಿದಾಗ ಮಹಾದೇವಿ ತನ್ನ ಭಾವನೆಯನ್ನು -

*ಗಿರಿಯಲ್ಲಲ್ಲದೆ ಹುಲು ಮೊರಡಿ ಯಲ್ಲಾಡುವದೆ ನವಿಲು?*
*ಕೊಳನಲ್ಲದೆ ಕಿರಿವಳ್ಳಕ್ಕೆಳಸುವದೇ ಹಂಸೆ ?*
*ಮಾಮರ ತಳಿತಲ್ಲದೇ ಸ್ವರಗೈಯುವದೇ ಕೋಗಿಲೆ?*
*ಪರಿಮಳವಿಲ್ಲದ ಪುಷ್ಪಕ್ಕೆಳಸುವದೇ ಭ್ರಮರ ?*
*ಎನ್ನದೇವಾ ಚೆನ್ನಮಲ್ಲಿಕಾರ್ಜುನನಲ್ಲದೇ?*
*ಅನ್ಯಕ್ಕೆಳಸುವದೇ ಎನ್ನಮನ? ಕೇಳಿರೇ ಕೆಳದಿಯರಿರಾ*

ಕೌಶಿಕ ಮಹಾರಾಜ ತಾನು ಮದುವೆಯಾಗುತ್ತೇನೆಂಬ ವಿಚಾರವನ್ನು ಮುಂದಿಟ್ಟಾಗ -

*'ಎಮ್ಮೆಗೊಂದು ಚಿಂತೆ, ಸಮಗಾರಗೊಂದು ಚಿಂತೆ*
*ಧರ್ಮಿಗೊಂದು ಚಿಂತೆ ಕರ್ಮಿಗೊಂದು ಚಿಂತೆ*
*ನನಗೆ ನನ್ನ ಚಿಂತೆ ತನಗೆ ಕಾಮದ ಚಿಂತೆ*
*ಒಲ್ಲೆ ಹೋಗು ಸೆರಗ ಬಿಡು ಮರುಳೆ*
*ಎನಗೆ ಚೆನ್ನಮಲ್ಲಿಕಾರ್ಜುನ ದೇವರು*
*ಒಲಿವರೋ ಒಲಿಯರೋ ಎಂಬ ಚಿಂತೆ' ಎಂದಳು.*

ರಾಜನ ಕಟ್ಟುಪಾಡಿಗೆ ಬಿದ್ದು, ಅವನಿಗೆ ಕೆಲವು ನಿಯಮಗಳನ್ನು ವಿಧಿಸಿ, ಅವುಗಳಂತೆ ನಡೆಯುವನೆಂದು ವಚನಬದ್ಧಳಾಗಿ ಮದುವೆ ಆದರೂ, ಲಿಂಗ-ಜಂಗಮ ಆರಾಧನೆ ಸಮಯದಲ್ಲಿ ಕೌಶಿಕನಿಂದ ಅಡ್ಡಿ ಬಂದಾಗ, ಮಹಾದೇವಿಯ ದೇಹದ ಆಶೆಯನ್ನು ಬಯಸಿದಾಗ-

*ಅಮೇಧ್ಯದ ಮಡಿಕೆ, ಮೂತ್ರದ ಕುಡಿಕೆ*
*ಎಲುವಿನ ತಡಿಕೆ, ಕೀವಿನ ಹಡಿಕೆ*
*ಸುಡಲೀ ದೇಹವ ಒಡಲು ವಿಡಿದು ಕೆಡದಿರು*
*ಚೆನ್ನಮಲ್ಲಿಕಾರ್ಜುನನರಿ ಮರುಳೇ ಎಂದಳು.*

ಅಲ್ಲದೇ ನಿನ್ನ ಕಲಿತನವನ್ನು ನಿನ್ನ ಇಂದ್ರಿಯಗಳನ್ನು ಗೆಲ್ಲುವುದರ ಮೂಲಕ ತೋರಿಸು ಎಂದು ಅರಮನೆಯ ಸೆರೆಯಿಂದ ಮುಕ್ತಳಾಗಿ ಕಲ್ಯಾಣದತ್ತ ಪ್ರಯಾಣಿಸಿದಳು. ಆಕೆಯ ಉದಾತ್ತ ಗುರಿ ಚೆನ್ನಮಲ್ಲಿಕಾರ್ಜುನನ್ನು ತನ್ನ ಪತಿಯಾಗಿ ಪಡೆಯುವುದರ ಬಗ್ಗೆ. ನಿಶ್ಚಿತ ನಿಲುವಿನಿಂದ ಅವಳನ್ನು ವಿಮುಕ್ತವಾಗಿಸಲು ಸಾಧ್ಯ? ಅವಳ ವೀರ ನುಡಿಗಳು-

*ನಾಳೆ ಬರುವುದು ನಮಗಿಂದೇ ಬರಲಿ*
*ಇಂದು ಬರುವುದು ನಮಗೀಗಲೇ ಬರಲಿ*
*ಆಗದು ಎನ್ನದಿರೋ ಚೆನ್ನಮಲ್ಲಿಕಾರ್ಜುನ*

ಅಕ್ಕ ತನ್ನ ಅನುಭಾವಿ ನಲ್ಲನನ್ನು (ಚೆನ್ನಮಲ್ಲಿಕಾರ್ಜುನ) ಆ ಪ್ರಕೃತಿಯ ಚೇತನಾ ಚೇತನಗಳಲ್ಲಿ ಅರಸುತ್ತಾಳೆ. ಅರಸುತ್ತ

ಹಂಬಲಿಸುತ್ತ ಪ್ರಾಣಿಪಕ್ಷಿಗಳ ಸಂಕುಲವನ್ನು ಪ್ರಶ್ನಿಸುತ್ತಾಳೆ.

*ಚಿಲಿಮಿಲಿ ಎಂದು ಓದುವ ಗಿಳಿಗಳಿರಾ*
*ಸರವೆತ್ತಿ ಹಾಡುವ ಕೋಗಿಲೆಗಳಿರಾ*
*ಎರಗಿ ಬಂದಾಡುವ ತುಂಬಿಗಳಿರಾ*
*ಕೊಳನ ತಡಿಯೊಳಾಡುವ ಹಂಸಗಳಿರಾ*
*ಗಿರಿಗಹ್ವರದೊಳಾಡುವ ನವಿಲುಗಳಿರಾ*
*ನೀವು ಕಾಣಿರೆ, ನೀವು ಕಾಣಿರೆ*
*ಚೆನ್ನಮಲ್ಲಿಕಾರ್ಜುನದೇವರ ಕಂಡರೆ ಕರೆದು ತೋರಿರೆ ಹಾಗೆ*
*ಅಳಿ ಸಂಕುಲವೇ, ಮಾಮರವೆ, ಬೆಳದಿಂಗಳೆ, ಕೋಗಿಲೆಯೆ*
*ನಿಮ್ಮನೆಲ್ಲರನೂ ಒಂದು ಬೇಡುವೆನು*
*ಎನ್ನೊಡೆಯ ಚೆನ್ನಮಲ್ಲಿಕಾರ್ಜುನದೇವರ ಕಂಡಡೆ ಕರೆದು ತೋರಿರೆ.*

ಅಕ್ಕ ತನ್ನ ಸುಂದರ ಚೆಲುವನಿಗಾಗಿ ಹಂಬಲಿಸಿದ್ದು ಕನಸಿನ ಸಹಜತೆ ಆಗಿದೆ.

*ಅಕ್ಕಕೇಳ, ನಾನೊಂದು ಕನಸ ಕಂಡೆ*
*ಅಕ್ಕಿ ಅಡಕೆ ಓಲೆ ತೆಂಗಿನಕಾಯಿ ಕಂಡೆ*
*ಚಿಕ್ಕಚಿಕ್ಕ ಜಡೆಗಳ ಸುಲಿಪಲ್ಲಗೊರವನು*
*ಭಿಕ್ಷಕೆ ಮನೆಗೆ ಬಂದುದು ಕಂಡೆನವ್ವ*
*ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು*
*ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.*
*ತನ್ನ ಆಧ್ಯಾತ್ಮಿಕ ಪತಿ ದೊರೆಯದಿದ್ದಾಗ*
*ಹಿಂಡನಗಲಿ ಹಿಡಿವಡೆದ ಕುಂಜರ*
*ತನ್ನ ವಿಂಧ್ಯವ ನೆನವಂತೆ ನೆನೆವೆನಯ್ಯಾ*
*ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನವಂತೆ*
*ನಿಮ್ಮವರ ನೆನೆವೆನಯ್ಯಾ*
*ಕಂದಾ, ನೀನಿತ್ತಬಾರೆಂದು ಕರೆದು ನಿಮ್ಮಂದವ ತೋರಯ್ಯಾ*

ಎಲ್ಲಿಯೂ ಕಾಣದಾದಾಗ ಹತಾಶಳಾಗದಿರುವದು ಅವಳ ಅಚಲತೆಗೆ ಸಾಕ್ಷಿಯಾಗಿದೆ.

*ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ*
*ಏರಿಲ್ಲದ ಗಾಯದಲ್ಲಿ ನೊಂದೆನವ್ವಾ*
*ಸುಖವಿಲ್ಲದೆ ಧಾವತಿಗೊಂಡೆನವ್ವಾ*
*ಚೆನ್ನಮಲ್ಲಿಕಾರ್ಜುನದೇವಂಗೊಲಿದು*
*ಬಾರದ ಭವಂಗಳಲ್ಲಿ ಬಂದೆನವ್ವಾ*

ಕಲ್ಯಾಣದತ್ತ ಪ್ರಯಾಣ ಬೆಳೆಸಿದಾಗ ಬಸವಣ್ಣನವರ ನಿವಾಸವನ್ನು ಕಂಡು ಆನಂದ ಭರಿತಳಾಗಿ–

ಚೆನ್ನಮಲ್ಲಿಕಾರ್ಜುನಯ್ಯಾ, ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರವೇ ಅವಿಮುಕ್ತ ಕ್ಷೇತ್ರವಯ್ಯಾ ಇದು ಕಾರಣ ನಿಮ್ಮ ಶರಣ ಬಸವಣ್ಣನ ಮಾಮನೆಗೆ ನಮೋ ನಮೋ ಎಂದು ಬದುಕುವೆನಯ್ಯಾ

ಅನುಭವ ಮಂಟಪವನ್ನು ಮಹಾದೇವಿಯು ಪ್ರವೇಶಿಸುತ್ತಿದ್ದ ಹಾಗೆ ಬಸವಣ್ಣನವರು ಸ್ವಾಗತಿಸುತ್ತಾರೆ. ರೂಪಿಲ್ಲದವರಿಗೆ ಒಲಿದವರಿಗೆ ತನುವಿನ ಹಂಗುಂಟೆ? ಮನವಿಲ್ಲದವರಿಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೆ ? ದಿಗಂಬರಂಗೆ ಒಲಿದವರಿಗೆ ಕೌಪೀನದ ಹಂಗುಂಟೆ ? ಕೂಡಲಸಂಗಮದೇವಯ್ಯಾ ? ಮಹಾದೇವಿಯಕ್ಕನೆಂಬ ಭಕ್ತೆಗೆ ಆವ ಹೊರೆಯೂ ಇಲ್ಲ ನೋಡಾ ಪ್ರಭುವೇ ಎಂದಾಗ ಅಲ್ಲಮಪ್ರಭುಗಳು ಪ್ರಶ್ನೆಗಳನ್ನು ಕೇಳುತ್ತಾ ಹೋಗುತ್ತಾರೆ. ವಾದ–ವಿವಾದದಲ್ಲಿ ಚನ್ನಬಸವಣ್ಣ, ಬಸವಣ್ಣ ಸಿದ್ಧರಾಮ, ಇತ್ಯಾದಿ ಶರಣರೆಲ್ಲರೂ ಭಾಗವಹಿಸಿದ್ದರು. ಒಂದು ಸ್ತರದಲ್ಲಿ ಅಕ್ಕ –"ಸ್ತ್ರೀದೇಹ ಸೌಂದರ್ಯದ ವ್ಯರ್ಥ ವ್ಯಾಮೋಹ ಬಿಡಿಸಲು ಸೌಂದರ್ಯದ ಹಂಗನ್ನು ಹರಿದೊಗೆಯ ಬಂದೆ" ಎಂದಾಗ ಪ್ರಭುದೇವರು "ನಿನ್ನ ದೇಹವನ್ನು ಕೂದಲ ಮರೆಯನ್ನೇಕೆ ಮಾಡಿದೆ? ಸೀರೆಯ ಮೇಲೆ ಕೂದಲಿನ ಮರೆ ಬೇರೆ ! ಅಂತರಂಗದ ನಾಚಿಕೆ ಬಹಿರಂಗದಲ್ಲಿ ತೋರುವುದು. ಇದು ಗುಹೇಶ್ವರ ಲಿಂಗಕ್ಕೆ ಮೆಚ್ಚಿಗೆಯಾಗುವುದಿಲ್ಲ' ಎಂದರು. ಅದಕ್ಕೆ ಅಕ್ಕ – 'ಒಂದರ ಹಂಗು ಬಿಟ್ಟು ಇನ್ನೊಂದರ ಹಂಗು ಹಿಡಿದಿರುವದು ನನಗಾಗಿ ಅಲ್ಲ ಇದು ನಿಮಗಾಗಿ, ಜನರ ಹಂಗಿಗಾಗಿ–

*ಫಲ ಒಳಗೆ ಪಕ್ವವಾಗಿಯಲ್ಲದೆ*
*ಹೊರಗಣ ಸಿಪ್ಪೆ ಒಪ್ಪಗೆಡದು ಕಾಮನ ಮುದ್ರೆಯ*
*ಕಂಡು ನಿಮಗೆ ನೋವಾದೀತೆಂದು*
*ಆ ಭಾವದಿಂದ ಮುಚ್ಚಿದೆ ಇದಕ್ಕೆ ನೋವೇಕೆ*
*ಕಾಡದಿರಣ್ಣ ಚೆನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳಾ.*

ಈ ದಿಟ್ಟತನದ ವೈರಾಗ್ಯ ಪ್ರಕಟವಾಯಿತು. ಅರಿಷಡ್ವರ್ಗಗಳಿಂದಲೇ ನಿರ್ಮಿತವಾದ ಈ ದೇಹದಲ್ಲಿದ್ದು ಅವುಗಳನ್ನು ದಾಟಿದ್ದೇನೆಂಬುದು ಹೇಗೆ ಎಂದಾಗ–

*'ಕಾಮದಿಂದ ಖಂಡ ಕ್ರೋಧದಿಂದ ಅಸ್ಥಿ*
*ಲೋಭದಿಂದ ಸಕಲ ವಿಷಯಗಳು*
*ಮೋಹದಿಂದ ನೋಡಿದೆನೆಂಬುದೆಲ್ಲವು*
*ಕಾಮನ ಬಲೆಯೊಳಗು ಕಾಮನ ಗೆದ್ದ*
*ದಾವಾವುದು ಹೇಳಾ ಗುಹೇಶ್ವರ ಲಿಂಗಕ್ಕೆ*
*ಎಂದು ಪ್ರಭುದೇವರು ಪ್ರಶ್ನಿಸಿದಾಗ–*
*ಕಾಮನನ್ನು ಗೆಲ್ಲುವುದಕ್ಕೆ ಆ ಕಾಮ ನನ್ನ ಮನದಲ್ಲಿ*
*ಹುಟ್ಟೇ ಇಲ್ಲ ಅಂಗದ ಭಂಗವ ಲಿಂಗ ಸುಖದಿಂದ*
*ಗೆಲಿದೆ ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ*
*ಜೀವದ ಭಂಗವ ಶಿವಾನುಭವದಿಂದ ಗೆಲಿದೆ*
*ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ*
*ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ*
*ಕಾಮನ ಸುಟ್ಟರುಹಿದ ಭಸ್ಮವ ನೋಡಯ್ಯ*
*ಚೆನ್ನಮಲ್ಲಿ ಕಾರ್ಜುನನ ಕಾಮನ ಕೊಂದು ಮನಸಿಜ*
*ನಾಗುಳಿದರೆ ಮನಸಿಜನ ತಲೆಬರಹವ ತೊಡೆದೆನು*

ಈ ಮಾತು ಕೇಳಿ ಅಲ್ಲಮಪ್ರಭುದೇವರು ಪ್ರಫುಲ್ಲಿತರಾದರು. ಅಕ್ಕಮಹಾದೇವಿ ಚರ್ಚೆಯಲ್ಲಿ ಭಾಗವಹಿಸಿ ಅನುಭಾವ ವಿಚಾರಗಳಲ್ಲಿ ಎಲ್ಲರಿಗೂ ತಿಳಿಯುವಂತೆ ಹೇಳಿದರು. ಹಿರಿಯ ಕಿರಿಯ ಶರಣರೆಲ್ಲರೂ ಕೊಂಡಾಡಿದರು. ಶೂನ್ಯ ಸಿಂಹಾಸನದ ಪೂಜ್ಯ ಅಲ್ಲಮಪ್ರಭುಗಳು –

*ಅಂತರಂಗದ ಪ್ರಭೆ ಬಹಿರಂಗದಲ್ಲೂ ತಾನೆಯಾಗಿ*
*ಗುಹೇಶ್ವರಲಿಂಗದಲ್ಲಿ ಸಂದಿಲ್ಲದಿಪ್ಪ*
*ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು*

ಎಂದು ಗೌರವವನ್ನು ಸೂಚಿಸಿದರು.

ಅಕ್ಕನು ಅನುಭವ ಮಂಟಪದಿಂದ ಉಂಟಾದ ಉಪಕಾರದ ಸ್ಮರಣೆಯನ್ನು ಮಾಡುತ್ತಾ –

*'ಅಯ್ಯಾ, ನಿಮ್ಮ ಅನುಭಾವಿಗಳ ಸಂಗದಿಂದ*
*ಎನ್ನ ತನು ಶುದ್ಧವಾಯಿತ್ತು*
*ಅಯ್ಯಾ ನಿಮ್ಮ ಅನುಭಾವಿಗಳು ಒರೆಹೊರೆದು ಕಡಿಕಡಿದು*
*ಅರೆದರೆದು ಆಗು ಮಾಡಿದ ಕಾರಣ ಎನ್ನ ಮನ ಶುದ್ಧವಾಯಿತ್ತು*
*ಎನ್ನ ಸರ್ವಭೋಗಾದಿ ಭೋಗಗಳೆಲ್ಲ ನಿಮ್ಮ*
*ಶರಣರಿಗರ್ಪಿತವಾಗಿ ಎನ್ನ ಪ್ರಾಣ ಶುದ್ಧವಾಯಿತ್ತು.*
*ಎನ್ನ ಸರ್ವೇಂದ್ರಿಯಗಳೆಲ್ಲ ನಿಮ್ಮ ಶರಣರ ಪ್ರಸಾದವ*
*ಕೊಂಡ ಕಾರಣ*
*ಎನ್ನ ಸರ್ವಾಂಗ ಶುದ್ಧವಾಯಿತ್ತು*
*ಎನ್ನನು ಆಗು ಮಾಡಿದ ಕಾರಣ*
*ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರಿಗೆ ತೊಡಿಗೆ*
*ಯಾದೆನಯ್ಯಾ ಪ್ರಭುವೆ'*

ಎಂದಾಗ 'ಅಲ್ಲಮಪ್ರಭುವಿನ ಅಪ್ಪಣೆಯಂತೆ ಚೆನ್ನಮಲ್ಲಿಕಾರ್ಜುನನ್ನು ಅರಸುತ್ತಾ ಶ್ರೀಶೈಲದತ್ತ ಹೊರಟಳು.

ಜೀವನದಲ್ಲಿ ಬರುವ ಸ್ತುತಿ ನಿಂದನೆಗಳನ್ನು ಹೇಗೆ ಸಮಭಾವದಿಂದ ಎದುರಿಸಬೇಕು ಎಂಬುದನ್ನು 'ಬೆಟ್ಟದ ಮೇಲೊಂದು ಮನೆ ಮಾಡಿ.........ಎಂದು ಹೇಳಿದ್ದಾಳೆ.

ಶ್ರೀಶೈಲದ ಕದಳಿವನ ಪ್ರವೇಶಿಸಲು ಸತಿ–ಪತಿ ಭಾವದಲ್ಲಿ ಬೆರೆತಾಗ

*ತನು ನಿಮ್ಮ ರೂಪಾದ ಬಳಿಕ ನಾನಾರಿಗೆ ಮಾಡುವೆ*
*ಮನ ನಿಮ್ಮ ರೂಪಾದ ಬಳಿಕ ನಾನಾರಾಧಿಸುವೆ*
*ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ ನಾನಾರನರಿವೆ*
*ಚೆನ್ನಮಲ್ಲಿಕಾರ್ಜುನ ನಿಮ್ಮಲ್ಲಿ ನೀವಾಗಿ ನಿಮ್ಮಿಂದ ನಿಮ್ಮ*
*ಮರೆದೆನಯ್ಯಾ' ಎಂದು*

ಆಧ್ಯಾತ್ಮದ ಪರಮಾವಧಿಯ ಪರಮಾನಂದದ ಅಲೆಗಳ ಮೇಲೆ ತೇಲುತ್ತಿರುವಾಗ

*ಲಿಂಗವೆನ್ನೆ ಲಿಂಗೈಕ್ಯವೆನ್ನೆ ಸಂಗವೆನ್ನೆ ನಿಸ್ಸಂಗವೆನ್ನೆ*
*ಆಯಿತೆನ್ನೆ ಆಗದೆನ್ನೆ ನೀನೆನ್ನೆ ನಾನೆನ್ನೆ*
*ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನೈಕ್ಯವಾದ ಬಳಿಕ*
*ಮತ್ತೇನೂ ಎನಲೊಲ್ಲದೆ ಇದ್ದೆನು.*

ಕೊನೆಗೆ ಕದಳಿಯ ವನ ಪ್ರವೇಶಿಸಿ ಅಲ್ಲಿಗೆ ಬಂದ ಸನ್ಯಾಸಿ ಕೌಶಿಕನನ್ನು ಭೇಟಿ ಮಾಡಿ 'ಅಂತರಂಗದ ಕದಳಿಯನ್ನು ಪ್ರವೇಶಿಸಿದಳು.

ಅಂತರಂಗದ ಕದಳಿ ಏರಲು, ಈಡಾ ಪಿಂಗಳ ಸುಷುಮ್ನ ನಾಡಿಗಳು ಸೇರುವ ಭ್ರೂ ಮಧ್ಯವೇ ತ್ರಿಕೂಟ, ಮಹಾದೇವಿ ವೈರಾಗ್ಯದ ಸೋಪಾನದಿಂದ ತ್ರಿಕೂಟ ಮಾರ್ಗದಿಂದ ಐಕ್ಯದ ತುದಿಯನ್ನು ಮುಟ್ಟಲು ಸಾಧನೆ ಮಾಡಿ ಸಾಧಿಸಿದಳು

*'ತನುವಿನೊಳಗಿದ್ದು ತನುವ ಗೆದ್ದಳು*
*ಮನದೊಳಗಿದ್ದು ಮನವ ಗೆದ್ದಳು*
*ವಿಷಯದೊಳಗಿದ್ದು ವಿಷಯಂಗಳ ಗೆದ್ದಳು*
*ಅಂಗಸಂಗವ ತೊರೆದು ಭವವ ಗೆದ್ದಳು*
*ಕೂಡಲ ಚೆನ್ನಸಂಗಯ್ಯನ ಹೃದಯಕಮಲವ*
*ಬಗಿದು ಹೊಕ್ಕು ನಿಜಪದವನ್ನೈದಿದ*
*ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ*
*ಎನುತಿರ್ದೆನು'*

ಎಂಬ ಹೃದಯ ತುಂಬಿದ ಚೆನ್ನಬಸವಣ್ಣನ ಮಾತು ಎಷ್ಟು ಅರ್ಥಪೂರ್ಣ!

(ಡಾ|| ಹೆಚ್. ತಿಪ್ಪೇರುದ್ರಸ್ವಾಮಿ ಅವರ ಕದಳಿಯ ಕರ್ಪೂರ ಆಧಾರ) ☆

# ಬಸವಣ್ಣ ಮತ್ತು ಅಂಬೇಡ್ಕರ್

-ಯು.ಎನ್. ಸಂಗನಾಳಮಠ, ಲೇಖಕರು, ಹೊನ್ನಾಳಿ-೫೭೭೨೧೭.

ಮಾನವನ ಮನೋವೃತ್ತಿ ಯಾವುದಾದರೊಂದು ನಿಮಿತ್ತ ಮಾತ್ರವಾಗಿ ತಡೆದುನಿಂತಾಗ, ಜೀವನವು ವ್ಯವಸ್ಥೆ ತಪ್ಪಿ ವೈಯಕ್ತಿಕವಾಗಿ ಸಾಮಾಜಿಕವಾಗಿ ಪತನ ಆಗುವುದು. ಆಗ ಒಬ್ಬ ದಾರ್ಶನಿಕ ಜನ್ಮವೆತ್ತಿ ಮಾನವರ ಮನೋವೃತ್ತಿಯ ಪ್ರವಾಹವನ್ನು ಯೋಗ್ಯ ರೀತಿಯಲ್ಲಿ ಹರಿಯುವಂತೆ ಜನಜೀವನದಲ್ಲಿ ಬದಲಾವಣೆಯನ್ನು ತೀವ್ರತರವಾಗಿ ಮಾಡುವುದು ಅನಿವಾರ್ಯವಾಗುತ್ತದೆ . ಇದೇ ಕ್ರಾಂತಿ. ಕ್ರಾಂತಿ ಇಲ್ಲಿ ಹಿಂಸೆ ಅಥವಾ ರಕ್ತಪಾತದಿಂದಲ್ಲ. ತೀವ್ರತರವಾದ ಬದಲಾವಣೆಯನ್ನು ಮಾಡಲು ಸಮರ್ಥನಾದವನು ಕ್ರಾಂತಿಪುರುಷ. ಈ ರೀತಿ ಜನರ ಜೀವನದ ಬೆಳವಣಿಗೆಯಲ್ಲಿ ಈ ರೀತಿಯ ಕ್ರಾಂತಿಯನ್ನು(ಪರಿವರ್ತನೆಯನ್ನು) ಮಾಡಿದವರನೇಕರು. ಯೇಸು, ಪೈಗಂಬರ, ಬುದ್ಧ, ಗುರುನಾನಕ, ಶಂಕರ, ಮಾರ್ಕ್ಸ್, ಗಾಂಧಿ ಇವರ ಸಾಲಿನಲ್ಲಿ ಸೇರಿದ ವ್ಯಕ್ತಿಗಳು ಬಸವಣ್ಣನವರು, ಅಂಬೇಡ್ಕರರು.

ಬಸವಣ್ಣ ಮತ್ತು ಅಂಬೇಡ್ಕರರನ್ನು ಆಯಾ ಜನಾಂಗದ ಜನರು ತಮ್ಮ ತಮ್ಮ ನಾಯಕನೆಂದು ಭಾವಿಸಿದ್ದಾರೆ. ಆದರೆ ಸಮಾಜ ಸುಧಾರಕರಾಗಿ ಕಾಣುತ್ತಾರೆ. ಬಸವಣ್ಣ ಮೇಲ್ವರ್ಗದಲ್ಲಿ ಜನಿಸಿದ್ದರೂ ಬ್ರಾಹ್ಮಣತ್ವವನ್ನು ಧಿಕ್ಕರಿಸಿ ಕೆಳವರ್ಗದ ಜನರಿಗೆ ಶ್ರಮಿಸಿದವರು. ಅಂಬೇಡ್ಕರ್ ಜನಿಸಿದ್ದು ಅಸ್ಪೃಶ್ಯ ಜನಾಂಗದಲ್ಲಿ, ಅವರ ನೋವನ್ನು ಅನುಭವಿಸಿ, ಶೋಷಿತ ಜನಾಂಗದ ವಿಮೋಚನೆಗಾಗಿ ಹೋರಾಟ ನಡೆಸಿದರು. ಇವರಿಬ್ಬರ ಹೋರಾಟ ಸಾಮಾಜಿಕ ಅಸಮಾನತೆಯ ವಿರುದ್ಧ, ಇವರ ಕಾಲದಲ್ಲಿ ಶತಮಾನಗಳಷ್ಟು ಅಂತರ ಇದ್ದರೂ ಚಿಂತನೆಗಳಲ್ಲಿ ಸಾಕಷ್ಟು ಸಾಮ್ಯತೆ ಇವೆ.

ಮಾನವರು ನೀತಿವಂತರಾಗಿ ಬಾಳಲು ಇಹ-ಪರಗಳಲ್ಲಿ ಸಲ್ಲುವಂತಾಗಲು ಅಗತ್ಯವಾದ ಅಹಿಂಸೆ, ಸತ್ಯ, ಆಸ್ತೇಯ. ಅಪರಿಗ್ರಹ, ಅಂತರಂಗಶುದ್ಧಿ-ಬಹಿರಂಗ ಶುದ್ಧಿ, ಸೌಜನ್ಯ ನೈತಿಕ ಮೌಲ್ಯಗಳನ್ನೊಳಗೊಂಡ ಸರಳ-ಸಾಮಾನ್ಯ ಧರ್ಮವನ್ನು ಜನಸಾಮಾನ್ಯರಿಗೆ ಅವರ ಆಡು ನುಡಿಯ ಕನ್ನಡ ಭಾಷೆಯಲ್ಲಿ ಬೋಧಿಸಿದರು. ಈ ಮೌಲ್ಯಗಳನ್ನು ಮೊದಲು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತಂದು, ನಂತರ ಅವುಗಳನ್ನು ತನ್ನ ನುಡಿ-ವಚನಗಳ ಮೂಲಕ ಜನತೆಗೆ ಬೋಧಿಸಿದರು. ಅಂತರಂಗಶುದ್ಧಿ ಎಂದರೆ ವ್ಯಕ್ತಿ ಶುದ್ಧತೆ ಬಹಿರಂಗ ಶುದ್ಧಿ ಎಂದರೆ ಸಾಮಾಜಿಕ ಶುದ್ಧತೆ. ಅದಕ್ಕಾಗಿ ಲೋಕದ ಡೊಂಕ ನೀವೇಕೆ ತಿದ್ದುವಿರಿ ನಿಮ್ಮ ನಿಮ್ಮ ಮನವ, ತನುವ ಸಂತೈಸಿಕೊಳ್ಳಿ ಎಂದಿದ್ದಾರೆ. ಅಂತರಂಗದಲ್ಲಿ ಶುದ್ಧನಾಗಿರದೇ ಬಹಿರಂಗದಲ್ಲಿ ಪ್ರಾಮಾಣಿಕವಾಗಿ ವರ್ತಿಸುವ ವರನ್ನು ಪರೋಕ್ಷವಾಗಿ ಇಲ್ಲಿ ತೋರಿಸ ಲಾಗಿದೆ.

ಜಾತಿ ಪದ್ಧತಿಯನ್ನು ನಿರ್ಮೂಲ ಮಾಡಲು ಪಣ ತೊಟ್ಟಿದ್ದ ಬಸವಣ್ಣನವರು ಜಾತಿ ಪದ್ಧತಿಯ ಮೂಲವನ್ನೇ ಪ್ರಶ್ನಿಸಿದರು. ಮನುಷ್ಯ ಕುಲದ ಏಕತೆಯನ್ನು ಈ ರೀತಿ ಹೇಳಿದ್ದಾರೆ

ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ
ಜಲವೊಂದೇ ಶೌಚಾಚಮನಕ್ಕೆ
ಫಲವೊಂದೇ ಷಡುದರ್ಶನ ಮುಕ್ತಿಗೆ
ಕುಲವೊಂದೇ ತನ್ನ ತಾನರಿದವಂಗೆ
ನಿಲವು ಒಂದೇ ಕೂಡಲಸಂಗಮದೇವಾ
ನಿಮ್ಮನರಿದವಂಗೆ

ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ವ್ಯಕ್ತಿಯೇ ನಿಜವಾದ ಕುಲಜ. ಕೆಳವರ್ಗದ ಜನರನ್ನು ಊರ ಹೊರಗಿಟ್ಟು ಹೊಲೆಯರೆಂದು ನಿಕೃಷ್ಟವಾಗಿ ಕಾಣುವುದು ಅವರಿಗೆ ಸ್ವಲ್ಪವೂ ಸರಿದೋರಲಿಲ್ಲ. ಮೇಲುಜಾತಿಯ ಶಿವ ಭಕ್ತರು ಮಹೇಶ್ವರರಾದರೆ ದಲಿತ ವರ್ಗದ ಶಿವಭಕ್ತರು ಹಿರಿಯ ಮಾಹೇಶ್ವರರು. ಅಂಬೇಡ್ಕರರ ಪ್ರಕಾರ ಹಿಂದೂ ಧರ್ಮದಲ್ಲಿ ಸುಧಾರಣೆಯಾಗದ ಹೊರತು ಜಾತಿ ಪದ್ಧತಿ ನಾಶವಾಗದ ಹೊರತು ಅಸ್ಪೃಶ್ಯತೆಯ ನಿವಾರಣೆ ಸಾಧ್ಯವಿಲ್ಲ ಎಂಬ ನಿಲವು ಅವರದು.

ಜನ-ರಹಿತ ಮತ್ತು ಅಧಿಕಾರ ಈ ಎರಡು ಆಯ್ಕೆಗಳಲ್ಲಿ ಇವರಿಬ್ಬರೂ ಆಯ್ಕೆ ಮಾಡಿದ್ದು ಜನರ ಹಿತ. ಬಸವಣ್ಣ ಮಂತ್ರಿಯಾಗಿದ್ದಾಗ ಅಧಿಕಾರಕ್ಕೆ ಅಂಟದೇ ಸಾಮಾನ್ಯರ ಜತೆ ತಮ್ಮನ್ನು ಗುರುತಿಸಿಕೊಂಡಿದ್ದರು. ಅಧಿಕಾರದ ನಿರ್ಮೋಹದ ಬಗ್ಗೆ, ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ ಪ್ರಮಥರು ಆ ನೀ ಬಿಜ್ಜಳ ಗಂಜುವೆನೆ ನಿಮ್ಮ ನಿಲುವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲಸಂಗಮದೇವಾ' ಎಂದಿದ್ದಾರೆ. ಅಂಬೇಡ್ಕರ್ ಬಯಸಿದ್ದರೆ ಉನ್ನತ ಹುದ್ದೆ ಹೊಂದಬಹುದಾಗಿತ್ತು.





ನೆಹರೂ ಸಚಿವ ಸಂಪುಟದಲ್ಲಿ ಕಾನೂನು ಸಚಿವರಾಗಿದ್ದಾಗ 'ಹಿಂದೂ ಕೋಡ್ ಬಿಲ್ಲು ಸಂಸತ್ತಿನಲ್ಲಿ ತಿರಸ್ಕಾರವಾದಾಗ ತಮ್ಮ ಸಚಿವ ಪದಕ್ಕೆ ರಾಜೀನಾಮೆ ಸಲ್ಲಿಸಿ ಅಧಿಕಾರ ತ್ಯಜಿಸುತ್ತಾರೆ.

ಆರ್ಥಿಕ ಅಸಮಾನತೆ ಬಗ್ಗೆ ಇಬ್ಬರೂ ಚಿಂತಿಸುತ್ತಾರೆ. ಸಂಪತ್ತಿನ ಅಸಂಗ್ರಹದ ಬಗ್ಗೆ ಪ್ರತಿಪಾದಿಸುತ್ತಾರೆ ಪ್ರತಿಯೊಬ್ಬರೂ ಒಂದಿಲ್ಲೊಂದು ಕಾಯಕ ಮಾಡಲೇಬೇಂಕೆಂದು ಅವರ ಧೋರಣೆ. ಅಂಬೇಡ್ಕರ್ ಚಾತುರ್ವರ್ಣ ಪದ್ಧತಿಯ ಶ್ರಮ ವಿಭಜನೆ ಸಮಾಜದಲ್ಲಿ ಆರ್ಥಿಕ ಅಸಮಾನತೆಯನ್ನು ಹುಟ್ಟು ಹಾಕಿತು ಎಂಬ ಅಭಿಪ್ರಾಯ ಹೊಂದಿದ್ದರು. ಅಸ್ಪೃಶ್ಯರನ್ನು ಸಾರ್ವಜನಿಕ ಜೀವನದಿಂದ ಹೊರಗಿಟ್ಟು ಅತಿ ಕೀಳು ಉದ್ಯೋಗಗಳನ್ನು ಕೊಟ್ಟಿದ್ದಕ್ಕೆ ಪ್ರತಿಭಟಿಸಿದರು. ಇದಕ್ಕೆ ಕಾರಣ ಬ್ರಾಹ್ಮಣ್ಯ ಮತ್ತು ಬಂಡವಾಳಶಾಹಿ ವ್ಯವಸ್ಥೆ. ಇದನ್ನು ಸಂವಿಧಾನದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ತಂದಾಗ ಸಾಮಾಜಿಕ ಆರ್ಥಿಕ ಅಸಮಾನತೆಯ ನಿವಾರಣೆಗೆ ಆದ್ಯ ಗಮನ ಕೊಟ್ಟರು. ಈ ದಿಶೆಯಲ್ಲಿ ಚಿಂತಿಸಿದಾಗ ಇವರಿಬ್ಬರೂ ಶೋಷಿತರ ಏಳ್ಗೆಗಾಗಿ ಪರಿಶ್ರಮಿಸಿದರು. ಬಸವಣ್ಣ ಕಾಯಕ-ದಾಸೋಹ ತತ್ವದ ಮುಖಾಂತರ, ಅಂಬೇಡ್ಕರ ಕಾನೂನಿನ ಮೂಲಕ ಸಂವಿಧಾನದ ಮೂಲಕ ಸಮಾಜವಾದ ಪ್ರತಿಪಾದಿಸಿದರು.

ಬಸವಣ್ಣನವರು ಮಹಿಳೆಯರಿಗೆ ಧಾರ್ಮಿಕ, ಆರ್ಥಿಕ ಸಾಮಾಜಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ಪುರುಷ ಸಮಾನ ಸ್ಥಾನಮಾನ ನೀಡಿದರು. 'ಅನುಭವಮಂಟಪದಲ್ಲಿ' ಸಮಾನ ಚರ್ಚೆಗೆ ಅಭಿವ್ಯಕ್ತಿಗೆ ಅವಕಾಶ ನೀಡಿದರು ಅಂಬೇಡ್ಕರ 'ಸಾಮಾಜಿಕ ಪ್ರಜಾಪ್ರಭುತ್ವ'ದಲ್ಲಿ ಸ್ತ್ರೀ ಪುರುಷ ಸಮಾನತೆ ಪ್ರತಿಬಿಂಬಿಸಿದರು.

ಬಸವಣ್ಣ ಅಂಬೇಡ್ಕರ್ ಇವರಿಬ್ಬರೂ ಸ್ವಾತಂತ್ರ್ಯ-ಸಮಾನತೆ-ಸಹೋದರತ್ವಗಳ ಸಮಾಜ ನಿರ್ಮಾಣ, ಮಹಿಳೆಯರ ವಿಮೋಚನೆ, ದೀನದಲಿತರ ಕಲ್ಯಾಣ, ನೈತಿಕತೆಯ ತಳಹದಿಯ ಆದರ್ಶ ಸಮಾಜಕ್ಕೆ ಪರಿಶ್ರಮಿಸಿದರು. ಸ್ವಾರ್ಥದ ಅಂಶವಿಲ್ಲದೇ ಅಧಿಕಾರ ಲಾಲಸೆಯಾಗಲಿ, ಕೀರ್ತಿ-ಕಾಮನೆಗೆ ಆಶೆ ಪಡದೇ ಮಾನವಕುಲದ ಕಲ್ಯಾಣಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಮಹಾನುಭಾವರು.

☆

# ಅಹಿಂಸೆಯೇ ಪರಮ ಧರ್ಮ

-ಜಲಜಾ ಜೈನ್, ಜೈನ್ ಸಮಾಜ,
ತುಮಕೂರು.

'ಜೈನಧರ್ಮ ಈ ಪದವು ಎರಡು ಶಬ್ಧಗಳು ಸೇರಿ ಆಗಿದೆ. ಇದರ್ತ ಪೂರ್ವಾರ್ಧ 'ಜೈನ' ಎಂದೂ, ಉತ್ತರಾರ್ಧ 'ಧರ್ಮ' ಎಂದೂ ಇದೆ. ಜಿನರನ್ನು ಪೂಜಿಸುವವರು ಜೈನರು. ಜಿನರಿಂದ ಬೋಧಿಸಲ್ಪಟ್ಟ ಧರ್ಮವು ಜೈನಧರ್ಮವಾಗಿದೆ.

ಧರ್ಮವನ್ನು ಆಚಾರ್ಯರು 'ವತ್ತು ಸಹಾಪೋ ಧಮ್ಮೋ' 'ಚಾರಿತ್ತಂ ಖಲು ಧಮ್ಮೋ' ಎಂದು ಅನೇಕ ವಿಧವಾಗಿ ಹೇಳಿದ್ದಾರೆ. ಜಿನ ಎಂದರೆ ಗಲ್ಲು ಎಂದಾಗುತ್ತದೆ. ಅಂದರೆ ಜ್ಞಾನ, ಚೇತನವುಳ್ಳ ಆತ್ಮನಿಗೆ ಅಂಟಿರುವ ಜ್ಞಾನಾವರಣದಿ ಎಂಟು ಕರ್ಮಗಳನ್ನು ಯಾರು ತಮ್ಮ ತಪೋಬಲದಿಂದ ಗೆಲ್ಲುತ್ತಾರೋ ಅವರು ಜಿನರಾಗುತ್ತಾರೆ.

ಈ ರೀತಿ ಕರ್ಮಗಳನ್ನು ಗೆಲ್ಲುವ ಶಕ್ತಿ ಪ್ರತಿಯೊಂದು ಜೀವಿಯಲ್ಲೂ ಇದೆ. ಕರ್ಮಗಳನ್ನು ಗೆಲ್ಲುವ ಸಾಹಸ ಮಾಡಿ ತಮ್ಮ ಪಂಚೇಂದ್ರಿಯಗಳನ್ನು ನಿಗ್ರಹಿಸಿ ಘೋರ ತಪಗೈದು ಕರ್ಮ ಶತೃಗಳನ್ನು ಗೆದ್ದವರು ಜಿನರು. ಸರ್ವಜ್ಞ ವಿತರಾಗಿಗಳು ಎನಿಸುವರು. ಇವರು ಬೋಧಿಸುವ ಧರ್ಮವು ಲೋಕಹಿತಕಾರಿಯಾದುದಾಗಿದ್ದು ಹೀಗೆ ಈ ಪಂಚಮ ಕಾಲದಲ್ಲಿ ಇಂಥ ಮಾರ್ಗವನ್ನು ಬೋಧಿಸಿದ ಮಹಾನ್ ಚೇತನ ಭಗವಾನ್ ಮಹಾವೀರ.

ಇಪ್ಪತ್ನಾಲ್ಕನೇ ತೀರ್ಥಂಕರರೇ ಭಗವಾನ್ ಮಹಾವೀರರು. ಇವರು ಜೈನಧರ್ಮದ ಸಂಸ್ಥಾಪಕರಲ್ಲಿ ಪ್ರಚಾರಕರು. ತಾವು ತಿಳಿದ ಜ್ಞಾನದಿಂದ ತತ್ಕಾಲದ ಸಮಾಜದ ಸ್ಥಿತಿಗತಿಗಳಿಗೆ ಅನುಸಾರವಾಗಿ ಜನರಿಗೆ ತಿಳುವಳಿಕೆ ನೀಡಿ, ಅವರು ಧಾರ್ಮಿಕವಾಗಿಯೂ, ಸಾಮಾಜಿಕವಾಗಿಯೂ ಜಾಗೃತಿ ಮೂಡಿಸಿ, ಈ ಕಾಲದ ಐತಿಹಾಸಿಕ ಮಹಾನ್‌ಪುರುಷರಾಗಿ ವಿಜೃಂಭಿಸಿದರು.

ಭಗವಾನ್ ಮಹಾವೀರರು ಬಿಹಾರ ರಾಜ್ಯದ ಕುಂಡಲಪುರದ ಸಿದ್ಧಾರ್ಥ ಮಹಾರಾಜನ ರಾಣಿಯ ಗರ್ಭದಿಂದ ಚೈತ್ರಶುದ್ಧ ತ್ರಯೋದಶಿಯಂದು ಜನಿಸಿದರು. ಇವರು ತಾಯಿಯ ಗರ್ಭಕ್ಕೆ ಅವತರಿಸಿದಂದಿನಿಂದ ಆ ರಾಜ್ಯದ ಸಿರಿ, ಸಂಪತ್ತು, ಹೆಚ್ಚುತ್ತಾ ಬಂದುದರಿಂದ ತಂದೆ- ತಾಯಿಗಳು ಅವರಿಗೆ 'ವರ್ಧಮಾನ' ಎಂದು ಹೆಸರಿಟ್ಟರು.

ವರ್ಧಮಾನರು ಬಾಲ್ಯದಿಂದಲೇ ವಿರಕ್ತ ಪ್ರವೃತ್ತಿಯವರಾಗಿದ್ದು, ಅವರ ದೈರ್ಯ, ಸಾಹಸ, ಜ್ಞಾನಾದಿಗಳಿಂದ ಅವರಿಗೆ ವೀರ, ಮಹಾವೀರ, ಸನ್ಮತಿ ಮುಂತಾದ ಹೆಸರುಗಳು ಬಂದವು. ಮಹಾವೀರರು ಬ್ರಹ್ಮಚಾರಿಗಳಾಗಿ ತಮ್ಮ 30ನೇ ವಯಸ್ಸಿನಲ್ಲಿ ದೀಕ್ಷೆ ಹೊಂದಿ ನಿರಂತರ 12 ವರ್ಷಗಳ ಕಾಲ ಗೋರ ತಪಗೈದು ಕೇವಲ ಜ್ಞಾನಿಗಳಾಗಿ ತಾವು ತಪೋಬಲದಿಂದ ಗಳಿಸಿದ ಜ್ಞಾನಾಮೃತ ಸತ್ಯ ವಿಚಾರಗಳನ್ನು ಜನರಿಗೆ ತಿಳಿಸ ಹೊರಟರು.

ಅವರ ಉಪದೇಶಕ್ಕಾಗಿ 'ಸಮವಸರಣ' ಸಭಾಮಂಟಪ ದೇವೆಂದ್ರನ ಆಜ್ಞೆಯಿಂದ ರಚಿತವಾಯಿತು. ಈ ಸಮವಸರಣ ಸಭೆಯು ಸರ್ವೋದಯ ತೀರ್ಥವೆನಿಸಿ ಅಲ್ಲಿ ಮಹಾವೀರ ಭಗವಂತರಿಂದ ಹೊರಟ ಉಪದೇಶಾಮೃತ ದಿವ್ಯ ಧ್ವನಿಯು ಲೋಕ ಕಲ್ಯಾಣಾರ್ಥವಾಗಿ ಸಕಲ ಜೀವಿಗಳಿಗೂ ಅವರವರ ಭಾಷೆಯಲ್ಲಿಯೇ ಅರ್ಥವಾಗುತ್ತಿತ್ತು. ಅವರು ಹೀಗೆ ಉಪದೇಶ ನೀಡಿ ಎಂಟು ಕರ್ಮಗಳನ್ನೂ ನಾಶಗೊಳಿಸಿ ಮುಕ್ತರಾದರು. ಅವರು ವಿಶ್ವ ಕಲ್ಯಾಣಾರ್ಥವಾಗಿ ಬೋಧಿಸಿದ ತತ್ವಗಳು ಇಂದಿಗೂ ಮಾರ್ಗದರ್ಶಕವಾಗಿವೆ.

ಭಗವಾನ್ ಮಹಾವೀರರು ನೀಡಿದ ಉಪದೇಶಗಳಲ್ಲಿ ಸಾಮಾನ್ಯ ಜನರೂ ಅನುಸರಿಸಬಹುದಾದ ತತ್ತ್ವಗಳೆಂದರೆ ರತ್ನತ್ರಯ ಮತ್ತು ಪಂಚಾಣು ವ್ರತಗಳು. ರತ್ನತ್ರಯವೆಂದರೆ ಮುಕ್ತಿ ಮಾರ್ಗವೆನಿಸಿದ ನಿಜವಾದ ನಂಬಿಕೆ. ನಿಜವಾದ ಜ್ಞಾನ ಮತ್ತು ನಿಜವಾದ ಆಚರಣೆಯಾಗಿದೆ.

ಪಂಚಾಣು ವ್ರತವೆಂದರೆ ಅಣುರೂಪದಲ್ಲಿ ಆಚರಿಸುವ ವ್ರತಗಳಾಗಿದ್ದು, ಸತ್ಯ, ಅಹಿಂಸೆ, ಆಚಾರ್ಯ, ಅಪರಿಗ್ರಹ ಮತ್ತು ಬ್ರಹ್ಮಚರ್ಯೆ. ಇವುಗಳನ್ನು ಜೀವನದಲ್ಲಿ ಅಳವಡಿಸಿ ಕೊಂಡು, ಶೀಲ, ಸಂಯಮಗಳನ್ನು ಪಾಲಿಸುತ್ತಾ ಅಸತ್ಯ, ಹಿಂಸೆ, ಕೊಲೆ, ಕಳವು, ಕ್ರೋಧಮಾನ, ಅಮಯಾಲೋಭ ದಿನಗಳನ್ನು ತೊರೆದು ಪಂಚೇದ್ರಿಯಗಳನ್ನು ನಿಗ್ರಹಿಸಿ ನಡೆದಲ್ಲಿ ಮುಂದಿನ ಮಾರ್ಗ ಸ್ವಪರ ಹಿತ ಸಾಧ್ಯ ಎಂದಿರುವರು.

ಧರ್ಮ ಪ್ರಧಾನವಾದ ಈ ರಾಷ್ಟ್ರದಲ್ಲಿ ಮೇಲಿನ ಪಂಚ ಶೀಲಗಳನ್ನು ಅನುಸರಿಸುತ್ತಾ ಬಂದಿರುವುದರಿಂದಲೇ ಇಲ್ಲಿ ಶಾಂತಿ ನೆಮ್ಮದಿಗಳು ನೆಲೆಸಿವೆ ಪರತಂತ್ರವಾಗಿದ್ದ ಭಾರತವನ್ನು ಸಹ ಮಹಾತ್ಮಾಗಾಂಧಿಯವರು ತಮ್ಮ ಅಹಿಂಸಾ ಅಸ್ತ್ರವನ್ನು ಝಳಪಿಸಿ ಸ್ವತಂತ್ರಗೊಳಿಸಿದರು.

ಹೀಗೆ ಪ್ರತಿಯೊಬ್ಬರೂ ಮೇಲಿನ ತತ್ವಗಳನ್ನು ತಿಳಿದು ಆಚರಿಸಿ ನಡೆದಲ್ಲಿ ಇಂದು ಲೋಕದಲ್ಲಿ ತಾಂಡವವಾಡುತ್ತಿರುವ ಅಶಾಂತಿ, ಅನ್ಯಾಯ, ಅತ್ಯಾಚಾರ, ಅನೀತಿಗಳು ತೊಲಗಿ ಶಾಂತಿ, ಸದಾಚಾರ, ಸದ್ವಿಚಾರಗಳು ನೆಲೆಸಿ 'ಜ್ಞಾನಜ್ಯೋತಿ' ಅಹಿಂಸಾ ಜ್ಯೋತಿಯ ಪ್ರಕಾಶ ಮನೆಮನೆಗಳಲ್ಲಿ ಮನಮನದಲ್ಲೂ ಬೆಳಗಲೂ ಸಾಧ್ಯ.

**ಮಹಾವೀರರ ಕೆಲವು ಉಪದೇಶಗಳು :**

* ಸಮಸ್ತ ಜೀವಿಗಳನ್ನು ಸಮತಾಭಾವದಿಂದ ಕಾಣಬೇಕು.
* ಸಂಯಮವು ಶಾಂತಿಯ ಸಾಧನವಾಗಿದೆ.
* ಅಹಿಂಸಾ ಪರಮೋಧರ್ಮ.
* ಕ್ಷಮಾ ಗುಣವನ್ನು ಸದಾ ಧರಿಸಬೇಕು.

ಈ ಬೋಧನೆಗಳು ಗೊಂದಲಮಯ ವಾತಾವರಣವಿರುವ ಈ ಕಾಲದಲ್ಲಿ ಅನುಸರಿಸಬೇಕಾದುದು ಅಗತ್ಯವಾಗಿದೆ. ಈ ತತ್ವಗಳ ಆಚರಣೆಯಿಂದ ಜಗತ್ತಿನಲ್ಲಿ ಸುಖ, ಶಾಂತಿ, ನೆಮ್ಮದಿಗಳು ನೆಲೆಸುತ್ತವೆ. ಅನ್ಯಾಯ, ಅತ್ಯಾಚಾರ, ಸ್ವಾರ್ಥ-ವಂಚನೆಗಳು ನಿವಾರಣೆಯಾಗಿ ಜಗತ್ತಿನ ಕಲ್ಯಾಣ ಸಾಧ್ಯವಾಗುತ್ತದೆ.

ಮಹದುಪಕಾರಗೈದ ಮಹಾನ್ ಧರ್ಮ ಪ್ರವರ್ತಕರಾದ 1008 ಭಗವಾನ್ ಮಹಾವೀರರ ಜನ್ಮ ಜಯಂತಿಯನ್ನು ಅವರ ನೀತಿ ಪಾಲನೆಯೊಂದಿಗೆ ಆಚರಿಸೋಣ. ಅವರ ತತ್ವಗಳನ್ನು ಸಮಸ್ತ ಜೀವಿಗಳು ಅನುಸರಿಸಿ ಆತ್ಮಕಲ್ಯಾಣವನ್ನು ಹೊಂದುವಂತಾಗಲೆಂದು ಆಶಿಸೋಣ.





# ನೂರು ತುಂಬಿದ ಸಿದ್ಧಗಂಗೆಯ ಸೂರ್ಯ

ಏಪ್ರಿಲ್ ಒಂದು ಶ್ರೀಮಠದಲ್ಲಿ ಜನಜಾತ್ರೆ. ಎತ್ತೆತ್ತ ನೋಡಿದರೂ ಭಕ್ತಾದಿಗಳ ಸಂಭ್ರಮ. ಸಡಗರ. ಹರಗುರು ಚರಮೂರ್ತಿಗಳ ಕೆಂದಾವರೆಯ ದಿವ್ಯದೃಶ್ಯ. ಮಂಗಳ ವಾದ್ಯಗಳ ಭವ್ಯ ಘೋಷ, ಪಟಾಕಿಗಳ ಚಟಪಟ ಸದ್ದು. ಸಾವಿರ ಸಾವಿರ ಅಭಿಮಾನಿಗಳ ತುಂಬು ಸಾಲು. ಹಳೆಯ ವಿದ್ಯಾರ್ಥಿಗಳ ಕಣ್ತುಂಬ ಕೃತಜ್ಞತೆಯ ಬೆಳಕು. ನಮ್ಮ ತಂದೆಗೆ ನೂರು ತುಂಬಿದವೆಂಬ ಹಿಗ್ಗು. ಶ್ರೀಗಳ ಮುಖದಲ್ಲಿ ನೂರು ಸಂವತ್ಸರಗಳ ಮಾಗಿದ ದಿವ್ಯ ಪ್ರಭೆ. ನಡೆದು ಬಂದರು ವೇದಿಕೆಗೆ, ಪಾದಪೂಜೆ ಸಲ್ಲಿಸಿದರು. ಕಿರಿಯ ಶ್ರೀಗಳು. ಎತ್ತರದ ಗದ್ದುಗೆಯ ಮಧ್ಯೆ ಬೆಳ್ಳಿಯ ಪೀಠ. ಪೀಠಧನ್ಯ. ದಾಸೋಹ ತಪಸ್ವಿಯನ್ನು ಹೊತ್ತ ಅನಂದ. ನುಡಿನಮನದ ಮಹಾಗಂಗೆ ಹರಿದು ಬಂದಳು. ಪೂಜ್ಯ ಶ್ರೀ ಬೇಲಿ ಮಠದ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರಸ್ವಾಮಿಗಳು, ಮಾಜಿ ಉಪಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ, ಮಾಜಿ ಸಚಿವರಾದ ಶ್ರೀ ವಿ. ಸೋಮಣ್ಣ, ಐ.ಎ.ಎಸ್. ಅಧಿಕಾರಿ ಶ್ರೀ ವಿ.ಪಿ. ಬಳಿಗಾರ್, ಪ್ರೊ॥ ಜಿ.ಎಸ್. ಸಿದ್ಧಲಿಂಗಯ್ಯ, ಪೋಲೀಸ್ ವರಿಷ್ಠಾಧಿಕಾರಿ ಶ್ರೀ ಶಂಕರ್‌ಬಿದರಿ, ಹಳೆಯ ವಿದ್ಯಾರ್ಥಿ ಶ್ರೀ ಎ.ಎಸ್. ಪಾಟೀಲ್(ನಡಹಳ್ಳಿ) ಪ್ರಮೀಳಾ ನೇಸರ್ಗಿ, ನ್ಯಾಯ ಮೂರ್ತಿ ಶ್ರೀ ಮಳಿಮಠ್, ಉದ್ಯಮಿ ಅಶೋಕ್ ಖೇಣಿ ಅವರುಗಳ ಶತಾಯುಷಿ ಸೂರ್ಯ ಶ್ರೀಗಳಿಗೆ ನುಡಿನಮನ ಸಲ್ಲಿಸಿದರು.



ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿಕಾಣಿಕೆ ಸಲ್ಲಿಸಿದ ಭಕ್ತಾದಿಗಳು 'ಬಾಳು ಧನ್ಯ' ವಾಯಿತೆಂದು ಭಾವಿಸಿದರು. ಶ್ರೀ ಎ.ಎಸ್. ಪಾಟೀಲ್ (ನಡಹಳ್ಳಿ) ಅವರು ಬೆಲೆಬಾಳುವ ಅತ್ಯಾಧುನಿಕ ಬೆಂಜ್ ಕಾರನ್ನು ಶ್ರೀಗಳಿಗೆ ಅರ್ಪಿಸಿದರು. ಶ್ರೀ ಸಿ. ನಾರಾಯಣ ಸ್ವಾಮಿರೆಡ್ಡಿಯವರು ದಾಸೋಹದ ಸೇವಾ ನಮ್ರತೆಗೆ ತಮ್ಮನ್ನು ಅರ್ಪಿಸಿಕೊಂಡರು. ಅನೇಕ ಭಕ್ತರು ಹೋಳಿಗೆ, ಕಜ್ಜಾಯ, ಲಾಡು, ಸೋಹನ್‌ಪಪ್ಪಡಿಗಳನ್ನು ತಮ್ಮ ಭಕ್ತ್ಯರ್ಥವಾಗಿ ತಂದು ದಾಸೋಹಕ್ಕೆ ಸಮರ್ಪಿಸಿದ್ದು ವಿಶೇಷವಾಗಿತ್ತು. ಶ್ರೀಗಳಿಗೆ ಅರ್ಪಿಸಿದ ಹೂಮಾಲೆಗಳ ಅಂದ ಚೆಂದ ಕಣ್ತುಂಬಿದರೆ, ಅವುಗಳ ರಾಶಿ ಬೆಟ್ಟದಷ್ಟು ಎತ್ತರವಾಗಿದ್ದಿತು. ಬೆಳಗಿನ ಚುಮು ಚುಮು ನಸುಕಿನಿಂದಲೇ ಸಿದ್ಧಗಂಗೆಯತ್ತ ಮುಖ ಮಾಡಿದ್ದ ಅಭಿಮಾನಿಗಳ ಸಾಲು ಸಂಜೆಯಾದರೂ ನಿಂತಿರಲಿಲ್ಲ. ನೂರು ತುಂಬಿದ ಶ್ರೀಗಳಿಗೆ ಎಲ್ಲರೂ ಹಾರೈಸಿದ್ದು ಇನ್ನೂ ನೂರ್ಕಾಲ ನಮ್ಮನ್ನು ಹರಸುತ್ತಿರಬೇಕು ಎಂಬುದಾಗಿ.

ಸಿದ್ಧಗಂಗೆಗೆ ಬೆಳಗಿನ ತಿಲಕವಿಟ್ಟ ಶ್ರೀಗಳು ಆಶೀರ್ವಚನ ನೀಡುತ್ತ 'ಬಸವಾದಿ ಶರಣರ ಆದರ್ಶಗಳು ನಮಗೆ ದಾರಿದೀಪವಾಗಿರಲಿ. ಎಲ್ಲರಿಗೂ ದಯಾಮಯ ನಾದ ಶ್ರೀ ಸಿದ್ಧಲಿಂಗೇಶ್ವರರು ಸನ್ಮಂಗಳ ವನ್ನುಂಟು ಮಾಡಲಿ, ನಮ್ಮ ಗುರುಗಳು ತೋರಿದ ಹಾದಿಯಲ್ಲಿ ನಡೆದು ಬಂದಿದ್ದೇವೆಂದು ಸಂತೋಷ ನಮ್ಮದಾಗಿದೆ'- ಎಂದರು.

ಸಿಹಿಯೂಟದ ಸಂತಸದ ನುಡಿಗಳೇ ದಿನದ ಉದ್ದಕ್ಕೂ ಅನುಕರಣಿಸಿದವು. ಮಾಧ್ಯಮದ ಬಂಧುಗಳು, ಧ್ವನಿ ಮಾಧ್ಯಮದ ಆತ್ಮೀಯರು ಅಂದಿನ ಸಮಗ್ರ ಸುದ್ಧಿಯನ್ನು ಬಿತ್ತರಿಸುವುದರಲ್ಲಿ ಸೇವಾ ಸಂತೃಪ್ತಿಯನ್ನು ತಮ್ಮದಾಗಿಸಿ ಕೊಂಡರು. ಶ್ರೀಮಠದ ಆಡಳಿತ ವರ್ಗದವರು, ಶಿಕ್ಷಕರು, ವಿದ್ಯಾರ್ಥಿಗಳು ಪ್ರಸಾದ ವಿತರಣೆಯಲ್ಲಿ ತೊಡಗಿ ಭಕ್ತಾದಿ ಗಳೆಲ್ಲರ ಪ್ರಶಂಸೆಗೆ ಪಾತ್ರರಾದರು. ಪೋಲೀಸ್ ಇಲಾಖೆ ಯವರ ಅತ್ಯುತ್ತಮ ಮಾರ್ಗದರ್ಶನದಲ್ಲಿ ಭಕ್ತಾಧಿಗಳು ಶಿಸ್ತು ಸಂಯಮ ಗಳಿಂದ ನಡೆದುಕೊಂಡದ್ದು ಸ್ಮರಣೀಯವಾಯಿತು.

# ಶರಣರ ಸ್ನೇಹ ಜೀವನ

-ಪಾಂಡೋಮಟ್ಟಿ ಜಿ.ಬಿ. ಚಂದ್ರಶೇಖರಪ್ಪ, ಉಪನ್ಯಾಸಕರು, ಮೋತಿ ವೀರಪ್ಪ ಸರ್ಕಾರಿ ಪದವಿಪೂರ್ವ ಕಾಲೇಜು, ದಾವಣಗೆರೆ.

**12**ನೇ ಶತಮಾನವು ಕರುನಾಡ ಸಂಸ್ಕೃತಿಯ ಸುವರ್ಣಯುಗವಾಗಿದೆ. ಬಸವಣ್ಣ ಸ್ಥಾಪಿಸಿದ ಅನುಭವ ಮಂಟಪ ಸರ್ವಶೋಷಣೆ ರಹಿತ, ಸರ್ವಸಮಾನತೆಸಹಿತ, ಸಕಲಜೀವರಾಶಿಗಳೊಂದಿಗೆ ಪ್ರೀತಿಯಿಂದ ಸ್ನೇಹಮಯ ಜೀವನ ನಡೆಸುವ ಕಲೆಯನ್ನು ಆ ಜೀವನದ ಸೂತ್ರಗಳನ್ನು ನಿರೂಪಿಸಿದೆ.

ಬಸವೇಶ್ವರರು ಸ್ವಯಂಜ್ಯೋತಿ ಸ್ವರೂಪವಾಗಿ ಇಷ್ಟಲಿಂಗವಾಗಿ ಪೂಜಿಸುವ ಲಿಂಗವಂತ ಧರ್ಮವನ್ನು ಸ್ಥಾಪಿಸಿದ್ದಾರೆ. ಬಸವ ಜ್ಯೋತಿಯ ಸಂಪರ್ಕದಿಂದ ಎಲ್ಲೆಡೆ ಶಿವಬೆಳಗು ಪ್ರಜ್ವಲಿಸಿತು ಎಂಬುದು ಅಲ್ಲಮಪ್ರಭುದೇವರ ಅಭಿಮತವಾಗಿದೆ. ಲಿಂಗವೆಂದರೆ ಒಂದು ಜಾತಿಯ ಕುರುಹಲ್ಲ ಮಾನವ ಕೋಟಿಯ ಮುಕ್ತದ್ವಾರದ ಬ್ರಹ್ಮಜ್ಞಾನದ ಪ್ರಾಯೋಗಿಕ ಕ್ರಿಯೆ. ಲಿಂಗವು ಹುಟ್ಟುಸಾವನ್ನು ಕಳೆಯುವ ಸಾಧನವಾಗಿದೆ.

ಸಕಲ ಜೀವರಾಶಿಯ ಲೇಸ ಬಯಸುವವನೇ ಕುಲಜನೆಂಬ ಸತ್ಯವನ್ನು ನೆಲೆಗೊಳಿಸಿ ಸಕಲಮಾನವರನ್ನು ಪರಶಿವ ಅರಿವು-ಆಚರಣೆಯಿಂದ ಅನುಭಾವಿಯಾದ ಯಾರಾದರೂ ಗುರು-ಜಂಗಮರಾಗಬಹುದೆಂದು ಪರಂಪರೆಯಿಂದ ಜಾತಿಯಾಧಾರಾದಿಂದ ಬಂದ ಸಂಪ್ರದಾಯಕ್ಕೆ ತಡೆಹಾಕಿ ಸಮಾನತೆಯಿಂದ ಆಚರಿಸುವ ಸ್ನೇಹಮಾರ್ಗ ತೋರಿದ್ದಾರೆ. ಸಮಾನತೆಯಿರುವಲ್ಲಿ ಸ್ನೇಹವಿದೆ-ಪ್ರೀತಿಯಿದೆ, ಅಸಮಾನತೆ ಅಹಂಕಾರಕ್ಕೆ ಎಡೆಮಾಡಿಕೊಟ್ಟು ವೈರತ್ವಕ್ಕೆ ದಾರಿಮಾಡಿಕೊಡುತ್ತದೆ. ಅಹಂಕಾರಿಗಳಲ್ಲಿ ಲಿಂಗವಿರುವುದಿಲ್ಲ. ದೈವತ್ವಪ್ರಾಪ್ತಿಯಿಲ್ಲ, ಲಿಂಗಾಂಗಸಾಮರಸ್ಯವಿಲ್ಲ 'ಅಹಂಕಾರ ಮನವನಿಂಬುಗೊಂಡಲ್ಲಿ ಲಿಂಗತಾನೆಲ್ಲಿಯದೊ? ಅಹಂಕಾರವಳಿದು ಲಿಂಗ ತನುವಾಗಬೇಕು ಅಹಂಕಾರ ರಹಿತವಾದಲ್ಲಿ ಸನ್ನಿಹಿತ ಕೂಡಲ ಸಂಗಮದೇವಾ' ಎಂದು ಬಸವಣ್ಣನವರು ಮನುಕುಲದಲ್ಲಿ ನಿರಹಂಕಾರದ ನಡೆನುಡಿಯ ಗುಣವನ್ನು ಬಯಸಿದ್ದಾರೆ.

ಶರಣರು ಅಹಂಕಾರ ರಹಿತರಾಗಿ ಸರ್ವರೊಡನೆ ತಮ್ಮನ್ನು ಸಮೀಕರಿಸಿಕೊಂಡು ಶಿವಾಚಾರದಧ್ವಜವನ್ನೆತ್ತಿ ಮೆರೆಯಿಸಿದ್ದಾರೆ. ಶಿವಾಚಾರದ ಸಮಾನತೆಯೇ ಸ್ನೇಹಪರ ಜೀವನದ ಸಂದೇಶ ಶಿವಭಕ್ತರಲ್ಲಿ ಕುಲಗೋತ್ರಗಳ ನಿಷೇಧ. ವರ್ಣಾಶ್ರಮವ್ಯವಸ್ಥೆಯ ನಿಷೇಧ, ಮೇಲುಕೀಳುಭಾವನೆಗಳ ನಿಷೇಧ, ಜಾತಿಕಲ್ಪನೆಯ ನಿಷೇಧ, ಜಾತ್ಯಾತೀತ ಸಮಾಜ ಕಲ್ಪನೆಗೆ ಒಲವು ವ್ಯಕ್ತವಾಗಿದೆ.

ಶಿವಾಚಾರ ಶರಣಧರ್ಮದಹೃದಯ-ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ ಷಟ್‌ಸ್ಥಲವೇ ಆತ್ಮವಾಗಿಪ್ಪ ಭಕ್ತರ ಕುಲವನರಸಿದರೆ ಭವಭವಗಳಲ್ಲಿ ಬಪ್ಪುದು ತಪ್ಪದು, ನೀರಿನಿಂದಾದಮುತ್ತು ಮರಳಿ ಉದಕವಪ್ಪುದೆ' ಶಿವಾಚಾರತತ್ವ ಭಕ್ತರಕುಲವನರಸದೆ, ಸಮಾನತೆಯಿಂದ ಕಾಣುವ ಸೂತ್ರವಾಗಿದೆ ದಾಸಿಪುತ್ರನಾಗಲಿ ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ಕಾಣಬೇಕು ಹೀಗಲ್ಲದೆ ಉದಾಸೀನಮಾಡಿದರೆ ಪಂಚಮಹಾಪಾತಕ ನರಕ ಕಾಣಾ ಕೂಡಲಸಂಗಮದೇವಾ ಎಂಬುದು ಬಸವಣ್ಣನವರ ಇಂಗಿತವಾಗಿದೆ.

ಉಂಬುದು ಉಡುವುದು ಶಿವಾಚಾರ ಕೊಂಬುದು ಕೊಡುವುದು ಕುಲಾಚಾರ ಎಂಬ ಅನಾಚಾರಿಯ ಮಾತ ಕೇಳಲಾಗದು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲ ಒಂದೇ ಎಂದು ಕೊಟ್ಟು ಕೊಂಬುದು ಸದಾಚಾರ ಮಿಕ್ಕದ್ದೆಲ್ಲ ಅನಾಚಾರವೆಂದು ಚೆನ್ನಬಸವಣ್ಣನವರು ತಿಳಿಸಿದ್ದಾರೆ.

ಪ್ರತಿಯೊಬ್ಬರು ಒಂದೇ ಎಂದು ಕಂಡು ಕೊಟ್ಟುಕೊಳ್ಳುವ ಸದಾಚಾರದ ಆಚರಣೆ ಇಂದಿನ ಸಮಾಜಕ್ಕೆ ಅತ್ಯಗತ್ಯವಾಗಿದೆ. ಕೂಗಿ ಕರೆಯುವ ಕಾಗೆ ಕೂಡಿ ಉಣ್ಣುವ ಕೋಳಿಗಳಲ್ಲಿರುವ ಅನುಕಂಪೆ ಸಮಾಜವಾದದ ಸ್ನೇಹಪರ ಬದುಕು ಮನುಕುಲದಲ್ಲಿ ಇರಬೇಕೆಂದು ಶರಣರು ಬಯಸಿದ್ದರು ಬಸವಣ್ಣ ಸರ್ವಜೀವಿಗಳಲ್ಲಿ ಶಿವನನ್ನು ಕಂಡು ಆ ಜೀವಿಗಳ ಶರೀರಿಯಾದ ಶಿವನಿಗೆ ಭಕ್ತನಾಗುವುದನ್ನು ಬಯಸಿದ್ದರು. ಇಷ್ಟಲಿಂಗಾರ್ಚಕರೆಲ್ಲರೂ ಸದ್ಭಕ್ತರೆಂದು ಆಚರಿಸಿ ತೋರಿ ಸ್ನೇಹಮಯ ಜೀವನಕ್ಕೆ ದಾರಿ ತೋರಿದ್ದಾರೆ.





ಬಸವಣ್ಣನವರು ಇವನಾರವ, ಇವನಾರವ..... ಕೂಡಲ ಸಂಗಮದೇವ ನಿಮ್ಮ ಮನೆಯ ಮಗನೆಂದೆನಿಸಯ್ಯ ಎಂಬ ವಚನದಲ್ಲಿ ಸಮಾನತೆಯೇ ಸಮಾಧಾನ ಅದುವೇ ಸ್ನೇಹ ಜೀವನವೆಂಬುದನ್ನು ವ್ಯಕ್ತಪಡಿಸಿ ಎಲ್ಲಾ ಬೇಧಗಳನ್ನು ತೊಡೆದು ಹಾಕಿ ಸಕಲ ಜೀವರಾಶಿಯನ್ನು ಲಿಂಗಸ್ವರೂಪವಾಗಿ ಕಂಡು ಸ್ನೇಹ ಭಾವ ಮೂಡಿಸಿದ್ದಾರೆ.

ಸಮತೆಯೆಂಬುದೇ ಯೋಗ ನೋಡಾ, ಸಮತೆ ಸಮಾಧಾನ ನೆಲೆಗೊಳ್ಳದಿದ್ದರೆ ಆ ಯೋಗ ಅಜ್ಞಾನವಾಗಿದ್ದು, ಸಹಸ್ರ ಋಷಿಗಳು ಸಮತೆ ಸಮಾಧಾನ ನೆಲೆಗೊಳ್ಳದೆ ಅನೇಕ ಜನ್ಮದಲ್ಲಿ ಬಂದಿದ್ದಾರೆ, ಸಮತೆ ನೆಲೆಗೊಂಡು ಸಮಾಧಾನ ಸಹಜವಾದುದ್ದೆ ಮುಕ್ತಿ ಕ್ಷೇತ್ರ ಎಂಬ ಶರಣ ವಾಣಿ ಸಮಾನತೆಯಲ್ಲಿ ಸ್ನೇಹವಿದೆ ಆನಂದವಿದೆಯೆಂಬುದನ್ನು ಸಾರಿದೆ. ಸಕಲ ಮಾನವರೆಲ್ಲ ಲಿಂಗದೊಳಗಿದ್ದು, ಲಿಂಗವನ್ನೊಳಗಿಟ್ಟುಕೊಂಡು ಪರಶಿವ ಸ್ವರೂಪರು. ಪರಶಿವನು ಪ್ರತಿಯೊಬ್ಬರ ಅಂತರಂಗದಲ್ಲಿ ಗುರು-ಲಿಂಗ-ಜಂಗಮ ಒಂದಾದ ಪರಶಿವನ ಬೀಜ ಸ್ವರೂಪವಾದ ಆತ್ಮ ಚೇತನವಾಗಿ ನೆಲೆಸಿರುವನೆಂದು ಸಮಾನತೆ ಸಾಧಿಸಿ ಭಿನ್ನ ಭಾವ ತೋರದೆ ಸ್ನೇಹ ಭಾವದಿಂದ ಆಚರಿಸಲು ಮಾರ್ಗದರ್ಶನ ಮಾಡಿದ್ದಾರೆ. ಪರಶಿವನ ಸ್ವರೂಪ ತಾವೆಂದರಿಯದೆ ಮರವೆಯಿಂದ ಭಿನ್ನರಾಗಿ ಕಾಣುತ್ತಿರುವರು ಭಿನ್ನತೆ ಅಳಿದು ಒಂದೆಂದು ತಿಳಿದು ಆಚರಿಸುವುದೇ ಶರಣರ ಸಮಾನತೆಯ ಸ್ನೇಹ ಜೀವನ ಸಂದೇಶವಾಗಿದೆ.

ಲಿಂಗದೊಳಗೆ ಅಖಿಳಾಂಡ ಕೋಟಿ ಬ್ರಹ್ಮಾಂಡಗಳಡಗಿಹವು. ಲಿಂಗವು ತಾನೇ ಬ್ರಹ್ಮಾಂಡದೊಳಡಗಿ, ಆ ಬ್ರಹ್ಮಾಂಡವು- ಲಿಂಗವು ತನ್ನೊಳಡಗಿದ ಬೇಧವು, ಶಾಸ್ತ್ರ ಬಲ್ಲವರಿಗೆ ಕಾಣಿಸದು ಆಗಮಯುಕ್ತರಿಗೆ ತಿಳಿಯದು, ಕರ್ಮಭೂಭಾರಿಗಳಿಗೆ ಸಲ್ಲದು, ಇದನ್ನು ಗುರು-ಭಕ್ತ ಗಣಂಗಳಿಗೆ ಗುರು ಪ್ರತ್ಯಕ್ಷಮಂ ಮಾಡಿ ತೋರಿದ ಬೇಧವು ಆದೆಂತೆಂದೊಡೆ ಕರಿ ಕನ್ನಡಿಯೊಳಗಡಗಿದಂತೆ, ಮುಗಿಲ ಮರೆಯ ಸೂರ್ಯನ ಹಾಗೆ, ನೇತ್ರ ಕೊನೆಯೊಳಗೆ ಆಕಾಶವಡಗಿದ ಹಾಗೆ, ಬೀಜದೊಳಗಿನ ವೃಕ್ಷದ ಹಾಗೆ, ಈ ಬೇಧ ಭಕ್ತರಾದವರಿಗೆ ಸಾಧ್ಯವಲ್ಲದೆ ಉಳಿದ ಭಿನ್ನಜ್ಞಾನಿಗಳೆತ್ತಬಲ್ಲರು ಎಂದಿದ್ದಾರೆ ಗಣದಾಸಿ ವೀರಣ್ಣ ಶರಣರು.

ಅಂತರಂಗ ಬಹಿರಂಗ ಶುದ್ಧಿಗೆ ಅಹಿಂಸೆಯೇ ಮುಖ್ಯವೆಂಬುದು ಶರಣರ ಸಂದೇಶ. ಅವರು ಕಾಯಾ-ವಾಚಾ-ಮನಸಾ ಅಹಿಂಸತತ್ವ ಪಾಲಿಸಿದ್ದಾರೆ. ಬಸವಣ್ಣನವರು ಅಂತರಂಗ ಬಹಿರಂಗ ಶುದ್ಧಿ ಇರುವಲ್ಲಿ ಸಂಗಯ್ಯನಿದ್ದಾನೆ ಎಂದು ಸಾರಿ ಮನುಕುಲದ ಲೇಸ ಬಯಸಿ ಸಾಮಾಜಿಕ ನೀತಿಗೆ ಮಾನವತಾವಾದದ ಆಧ್ಯಾತ್ಮಿಕ ಬುನಾದಿ ಹಾಕಿ ಪ್ರೀತಿಯಿಂದ ಸಹ ಜೀವನ ನಡೆಸುವಂತೆ ಅರುಹಿದ್ದಾರೆ.

ಪರಮ ಗುರುಸಂಗನ ಬಸವಯ್ಯ ಸರ್ವಜಾತಿಯ ಲಿಂಗದ ರಾಶಿಯ ಮಾಡಿದ ಸಿದ್ಧಾಂತ ಕಪಿಲಸಿದ್ಧ ಮಲ್ಲಿಕಾರ್ಜುನ ಎಂಬ ವಚನ ಸರ್ವರೂ ಲಿಂಗ ಸ್ವರೂಪಿಗಳೆಂದು ಕಂಡು ಸ್ನೇಹ ಪರ ಜೀವನ ನಿರೂಪಿಸಿದ ಅಣ್ಣನ ನಿಲುವನ್ನು ಸ್ಪಷ್ಟಪಡಿಸಿದೆ.

ಶರಣ ಧರ್ಮದ ಮೂಲ ಸಂದೇಶ ಕಾಯಕ-ದಾಸೋಹ ತತ್ವಗಳಾಗಿವೆ. ಇವು ಸುಗಮ ಜೀವನಕ್ಕೆ ಸಹಕಾರಿಯಾಗಿವೆ. ಗಳಿಕೆಯಲ್ಲಿ ನೀತಿ-ಬಳಕೆಯಲ್ಲಿ ಪ್ರೀತಿ ಇದ್ದರೆ ಬದುಕಿನಲ್ಲಿ ಸಂತೃಪ್ತಿ ಸಾಧ್ಯ. ಕಾಯಕ ಜೀವಿಗಳೆಲ್ಲರೂ ಸಮಾನರು. ಕಾಯಕದಲ್ಲಿ ಮೇಲು ಕೀಳು ಎಣಿಸಬಾರದು ಯಾವ ಕಾಯಕವಾದರೇನು ಭಾವ ಶುದ್ಧವಾಗಿ ಮಾಡುವುದೇ ದೇವಪೂಜೆಯೆಂದು ಸಾರಿ - ಕಾಯಕವೇ ಕೈಲಾಸವೆಂದರುಹಿದ್ದಾರೆ. ಜಾತಿ ತಾರತಮ್ಯ ಕಾಯಕ ಭಿನ್ನತೆಗಳು ಮಾನವ ನಿರ್ಮಿತ ವ್ಯವಸ್ಥೆಗಳಾಗಿವೆ. ಬ್ರಾಹ್ಮಣದಿಂದ ಹಿಡಿದು ಅಂತ್ಯಜರವರೆಗೆ ಸರ್ವರೂ ವರ್ಣಾಶ್ರಮ ರಹಿತರಾಗಿ ಸ್ನೇಹಮಯ ಜೀವನ ನಡೆಸಿದ್ದಾರೆ. ಬಸವಣ್ಣನವರು ಎಲ್ಲಾ ಬೇಧಗಳನ್ನು ತೊಡೆದು ಹಾಕಿ ಮಾನವರೆಲ್ಲಾ ಸಮಾನರು ಪರಶಿವ ಸ್ವರೂಪವೆಂದು ಭಾವಿಸಿ ಅಪ್ಪ-ಬೊಪ್ಪ, ಅಣ್ಣ-ಅಕ್ಕ, ಅಯ್ಯಾ ಮುಂತಾಗಿ ಕರೆದು ಆತ್ಮೀಯ ಬಂಧುಗಳಂತೆ ಅಪ್ಪಿಕೊಂಡು ಸ್ನೇಹಪರ ಜೀವನಕ್ಕೆ ನಾಂದಿ ಹಾಡಿದ್ದಾರೆ.

ಶರಣರು ಹೆಣ್ಣು ಗಂಡಿನಲ್ಲಿರುವ ಆತ್ಮಚೇತನ ಒಂದೇ ಎಂದು ಸಾರಿ ಸ್ತ್ರೀಯರಿಗೆ ಪುರುಷರಂತೆ ಸಮಾನ ಹಕ್ಕುಗಳನ್ನು ನೀಡಿ ಗೌರವಯುತ ಗೃಹಸ್ಥ ಜೀವನಕ್ಕೆ ಆಸ್ಪದ ಜೀವನವು ಆಧ್ಯಾತ್ಮ ಸಾಧನೆಯನ್ನು ಸಾಧಿಸುವ ಶ್ರೇಷ್ಠ ಹಾಗೂ ಸುಲಭಮಾರ್ಗವೆಂದು ಆಚರಿಸಿ ತೋರಿ ಹೆಣ್ಣು ಗಂಡಿನ ಸಮಾನತೆಯನ್ನು ಅರ್ಥಪೂರ್ಣವಾಗಿ ಇಂದಿನ

ಕಾಲಕ್ಕೂ ಅನ್ವಯವಾಗುವಂತೆ ಸಾಧಿಸಿ ತೋರಿಸಿದ್ದಾರೆ.

ಪರವದುವ ಮುಟ್ಟದಿಪ್ಪುದೇ ಶೀಲ ಪರಸ್ತ್ರೀಯರ ಸಂಗ ಪಂಚಮಹಾಪಾತಕ ಎಂದು ಕಂಡ ಶರಣರು ಹೆಣ್ಣಿಗೆ ಪೂಜ್ಯತೆ ಪಾವಿತ್ರತೆ ತಂದುಕೊಟ್ಟದ್ದು, ಶರಣರ ಸ್ನೇಹ ಬದುಕಿನ ಸೂತ್ರವಾಗಿದೆ. ಲಿಂಗವಿದ್ದಲ್ಲಿ ಹೊಲೆಯಿಲ್ಲ ಜಂಗಮವಿದ್ದಲ್ಲಿ ಕುಲವಿಲ್ಲ, ಪ್ರಸಾದವಿದ್ದಲ್ಲಿ ಎಂಜಲಿಲ್ಲ. ಲಿಂಗಧಾರಿ ಸದಾಶುಚಿ-ಸದಾಸುಖಿ ಗುರುಹಸ್ತದಲ್ಲಿ ಹುಟ್ಟಿ ಲಿಂಗಧಾರಿಗಳಾದ ಲಿಂಗಾಯತರು ಪರಶಿವ ಸ್ವರೂಪರು ಹುಟ್ಟು ಹೊಂದಳಿದ ನಿಜಲಿಂಗೈಕ್ಯರು ಎಂದು ಸಾರಿ ಸಕಲ ಭಕ್ತರನ್ನು ಲಿಂಗಸ್ವರೂಪರಾಗಿ ಕಾಣುವ ದಾರಿ ತೋರಿ ಇಷ್ಟಲಿಂಗ ಸೂತ್ರದ ಮೂಲಕ ಮನುಕುಲವನ್ನು ಜೋಡಿಸಿ ಮನುಕುಲದ ಸ್ನೇಹಪರ ಬದುಕನ್ನು ರೂಪಿಸಿದ್ದಾರೆ.

ಜಗದ ಅನೇಕ ಧರ್ಮಗಳು ದೇವರನ್ನು ಹೊರಗೆ ಹುಡುಕಲು ಹಚ್ಚಿ ವಿವಿಧ ದೇಹದಂಡನೆಯ ಮಾರ್ಗಗಳನ್ನು ಆಚರಣೆಗಳನ್ನು ರೂಪಿಸಿದ್ದು, ಇದರಿಂದ ಭಕ್ತರೂ ಅನೇಕ ಶೋಷಣೆಗೆ ಒಳಗಾಗಿ ದೇವರನ್ನು ಕಾಣದೆ ಹತಾಶರಾದರು. ನಾನು ನೀನೆಂಬ ಭಿನ್ನಭಾವವಳಿದು ಕೂಡುವ ಬಸವಾದಿ ಶರಣರ ಲಿಂಗಾಂಗ ಯೋಗವನ್ನರಿಯುದೆ ಬರೀ ಅಹಂಭಾವದಿಂದ ವರ್ತಿಸುತ್ತಿದ್ದಾರೆ ಅವರಿಗೆ ಶರಣರು ತೋರಿದ ಲಿಂಗಾಂಗ ಯೋಗ ಸ್ನೇಹಪರ ಜೀವನದ ಮುಮಾರ್ಗವಾಗಿದೆ.

ಶರಣರು ಮೊದಲಿದ್ದ ಭಯ ಮೂಲಧರ್ಮವನ್ನು ದಯಮೂಲ ಧರ್ಮವನ್ನಾಗಿಸಿ ಸ್ನೇಹಪರ ಜೀವನಕ್ಕೆ ನಾಂದಿ ಹಾಡಿದ್ದಾರೆ ದಯವಿಲ್ಲದ ಧರ್ಮವಾವುದಯ್ಯ ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಧರ್ಮದ ಮೂಲವಯ್ಯಾ ಎಂದು ಎಲ್ಲರನ್ನು ಸ್ನೇಹ ಪರವಾಗಿ ಕಾಣುವಂತೆ ತಿಳಿಸಿದ್ದಾರೆ.

ಬಸವಣ್ಣನವರು ಮರ್ತ್ಯಲೋಕವನ್ನೆ ಕರ್ತಾರನ ಕಮ್ಮಟವಾಗಿಸಿ ಪಾಪಿಗಳನ್ನು ಪತಿತರನ್ನು ಕಳ್ಳರನ್ನು ಕೂಡಲ ಸಂಗನ ಸ್ವರೂಪವಾಗಿ ಕಂಡು ಸೇವೆ ಮಾಡಿ ಸ್ನೇಹಪರ ಬದುಕಿಗೆ ಮಾರ್ಗದರ್ಶಿಸಿದ್ದಾರೆ. ಸಕಲ ಜೀವ ಕುಲವೆಲ್ಲಾ ದೇವನ ನಿರ್ಮಿತಿ ಪರಶಿವ ಸ್ವರೂಪವೆಂಬ ಸೋದರ ಭಾವದಿಂದ ಆಚರಿಸಲು ತಿಳಿಸಿ ಸಕಲ ಜೀವ ಕುಲಸೇವೆಯೇ ಪರಶಿವ ಸೇವೆಯೆಂದು ಸಾರಿ ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೆ ನರಕವೆಂದು ತಿಳಿಸಿ ಪ್ರೀತಿಯಿಂದ ಸ್ನೇಹದಿಂದ ಬಾಳುವಂತೆ ತಿಳಿಸಿದ್ದಾರೆ.

ಶರಣರಿಗೆ ಸೃಷ್ಟಿಯ ಜೀವಕೋಟಿಯೆ ಜಂಗಮವಾಗಿ ಕಾಣಲು ಕಾರಣ ಅವರಲ್ಲಿದ್ದ ಸಮತಾವಾದವೇ ಆಗಿದೆ. ಮನುಷ್ಯ ತನ್ನ ಬದುಕಿನಲ್ಲಿ ಯಶಸ್ಸು ಸಾಧಿಸಲು ಸತ್ಯವೆಂಬ ಆಯುಧ ಕರುಣೆ ವಿನಯ ಸಮತೆ, ಸಾಹಸ, ಗುಣಗಳನ್ನು ಬೆಳೆಸಿಕೊಂಡರೆ ಸ್ನೇಹಮಯ ಜೀವನ ರೂಪುಗೊಳ್ಳುತ್ತದೆ. ಸೋದರತ್ವ ಸಂಕೇತವಾಗಿ ಶರಣ ಸಂಗಕ್ಕೆ ದೈವತ್ವಕ್ಕೇರುವ ನೆಲೆ ತೋರುವ ಮುಖ್ಯ ತಾಣವೆಂದು ಸಾರಿದ್ದಾರೆ. ಸ್ನೇಹ ಪರ ಜೀವನವೇ ಶರಣರ ಆಚರಣೆಯಾಗಿತ್ತು. ನಿಜವಾದ ಭಕ್ತಿಯ ಕುರುಹು ಪ್ರೇಮ ಅದರ ಲಕ್ಷಣ ಸಮರ್ಪಣೆ ಸಕಲ ನೀತಿಗೆ ಪ್ರೀತಿಯೆ ಕಾರಣವಾಗಿದೆ. ಲಿಂಗ ಸಮಾನತೆ, ಅಸ್ಪೃಶ್ಯತಾ ನಿವಾರಣೆ, ಜಾತಿ ವಿನಾಶ, ವಿಚಾರ ಸ್ವಾತಂತ್ರ್ಯ, ಕಾಯಕ ದಾಸೋಹ ಮಹತ್ವ, ಸಮಾನ ಹಂಚಿಕೆ, ಸರ್ವರಿಗೆ ಸಮಬಾಳು ಸಮಪಾಲು ಇವುಗಳು ಶರಣರು ಸ್ನೇಹ ಪರ ಬದುಕಿನ ಸೂತ್ರಗಳಾಗಿವೆ.

ಕಂಡ ಭಕ್ತರಿಗೆ ಕೈಮುಗಿಯುವಾತನೇ ಭಕ್ತ ಮೃದು ವಚನವೇ ಸಕಲ ಜಪ ತಪ ಸದುವಿನಯವೇ ಸದಾಶಿವನ ಒಲುಮೆ ಹೀಗಿಲ್ಲದವರನ್ನು ದೇವನು ಒಲ್ಲನೆಂದು ಸಾರಿ ಸದುವಿನಯವೇ ಸ್ನೇಹಜೀವನ ಸೂತ್ರವೆನ್ನುವುದನ್ನು ಶರಣರು ತೋರಿದ್ದಾರೆ. ಮುಖ್ಯವಾಗಿ ಜನರ ನುಡಿ-ಸ್ಫಟಿಕದ ಸಲಾಕೆ, ಮುತ್ತಿನ ಹಾರ, ಮಾಣಿಕ್ಯದ ದೀಪ್ತಿಯಾಗಿರಬೇಕು. ಪಂಚಭೂತಗಳು ಎಲ್ಲರಿಗೂ ಒಂದೇ ಆಗಿರುವಾಗ ಮನುಷ್ಯರಲ್ಲಿ ಅನೇಕ ತಾರತಮ್ಯ ಸಲ್ಲದು ಎಂದು ಸಾರಿ ಎಲ್ಲರಲ್ಲಿಯ ಒಳ್ಳೆಯತನವನ್ನು ಒಪ್ಪಿ ಎಲ್ಲರನ್ನೂ ತನ್ನವರೆಂದು ಅಪ್ಪಿಕೊಂಡು ಕರುಣೆ, ವಿನಯ, ಸಮತೆಯಂತಹ ಮಾನವೀಯ ಮೌಲ್ಯಗಳ ಮೂಲಕ ಸ್ನೇಹ ಬದುಕಿಗೆ ಬಸವಾದಿ ಶರಣರು ನಾಂದಿ ಮಾಡಿದ್ದಾರೆ.

☆

**ಸಂತಾಪ**

'ಸಿದ್ಧಗಂಗಾ' ಮಾಸಪತ್ರಿಕೆಯ ಅಜೀವ ಸದಸ್ಯರಾಗಿದ್ದ ಸಿದ್ಧಪ್ಪ ಬಸವಲಿಂಗಪ್ಪ ಸುಲ್ತಾನ್‌ಪುರಿ, ಸಹಕಾರಿ ಸಂಘಗಳ ಉಪನಿಬಂಧಕರು, ಬೆಳಗಾವಿ ಇವರು ದಿನಾಂಕ 12-03-2008 ಬುಧವಾರ ಬೆಳಗಾವಿಯಲ್ಲಿ ಲಿಂಗೈಕ್ಯರಾದರೆಂದು ತಿಳಿಸಲು 'ಸಿದ್ಧಗಂಗಾ' ವಿಷಾಧಿಸುತ್ತದೆ.





## ಜಾಗತೀಕರಣ ಮತ್ತು ಸಂಸ್ಕೃತಿ

-ಶಿವಕುಮಾರ್ ಪಾವಟೆ

**ಈ**ಗ ಎಲ್ಲೆಲ್ಲೂ ಜಾಗತೀಕರಣದ ಸೊಲ್ಲು. ಈ ಜಾಗತೀಕರಣ ಎಂದರೇನು ಮತ್ತು ಅದರ ಇರವು-ಹರವುಗಳನ್ನು ಅರಿಯುವ ಮುನ್ನವೇ ಹಬ್ಬಿ ಹರಡಿ ಹೆಮ್ಮರವಾಗಿ ನಿಂತಿದೆ. ಜಾಗತೀಕರಣವು ಸಮಾಜಕ್ಕೆ ಎಷ್ಟರ ಮಟ್ಟಿಗೆ ಒಳಿತು-ಕೆಡಕು ಎಂದು ವಿವೇಚಿಸುವ ಸವಾಲು ನಮ್ಮ ಮುಂದಿದೆ.

ಜಾಗತೀಕರಣವು 'L P G (Liberalization, Privatization, Globalization)'ಎಂಬ ಪರಿಕಲ್ಪನೆಯ ಒಂದು ಭಾಗ. ಅಂದರೆ ಸ್ಥಳೀಯ(ಲೋಕಲ್) ಮಾರುಕಟ್ಟೆಗಳನ್ನು ಜಾಗತಿಕ (ಗ್ಲೋಬಲ್) ಮಾರುಕಟ್ಟೆಗಳಾಗಿ ಮತ್ತು ಬಹುರಾಷ್ಟ್ರೀಯ ಕಂಪನಿಗಳ ಬಂಡವಾಳ ಹೂಡಿಕೆಗೆ ಮುಕ್ತ ಅವಕಾಶ ಕಲ್ಪಿಸುವ ಒಂದು ವ್ಯಾಪಾರಿ ಒಪ್ಪಂದ. ಈ ಒಪ್ಪಂದದಡಿಯಲ್ಲಿ ಬರುವ ಎಲ್ಲ ದೇಶಗಳು ತಮ್ಮ ಮಾರುಕಟ್ಟೆ ಗಳನ್ನು ಸದಸ್ಯ ದೇಶಗಳ ಬಂಡವಾಳ ಹೂಡಿಕೆಗೆ ಮುಕ್ತಗೊಳಿಸಬೇಕಾಗುತ್ತದೆ. ಇದರಿಂದ ಆರ್ಥಿಕ ಅಭಿವೃದ್ಧಿಯಾಗುತ್ತದೆ ಎಂಬ ಒಂದು ಆಶಾವಾದ ಇದಕ್ಕೆ ಕಾರಣ. ಅಭಿವೃದ್ಧಿ ಹೊಂದುತ್ತಿರುವ ಭಾರತದಂಥ ದೇಶಗಳಿಗೆ ಕೂಡ ಅದು ಅನಿವಾರ್ಯವಾಗಿಬಿಟ್ಟಿದೆ.

ಆದರೆ ಈ ಸಂದರ್ಭದಲ್ಲಿ ಕೆಲ ಪ್ರಶ್ನೆಗಳೂ ಸಹಜವಾಗಿ ಉದ್ಭವಿಸುತ್ತದೆ. 'ಅಭಿವೃದ್ಧಿ' ಪದಕ್ಕೆ ಆರ್ಥಿಕ ಅಂಶಗಳೇ ಮಾನದಂಡವೇ ? ಒಂದು ಸಮುದಾಯ ಆರ್ಥಿಕವಾಗಿ ಅಭಿವೃದ್ಧಿಯಾದರೆ ಸಮಗ್ರ ಅಭಿವೃದ್ಧಿಯ ಗುರಿ ಸಾಧಿಸಿದಂತೆಯೇ? ಮೇಲಾಗಿ ಕಲೆ, ಸಾಹಿತ್ಯ, ಸಮಾಜ, ಸಂಸ್ಕೃತಿ, ಮತ್ತು ಮೌಲ್ಯಗಳ ಮೇಲೆ ಜಾಗತೀಕರಣದ ಪ್ರಭಾವವೇನು? ಹೀಗೆ ಹತ್ತು ಹಲವು ಪ್ರಶ್ನೆಗಳು ನಮ್ಮೆದುರಿಗೆ ಬರುತ್ತವೆ.

ಜಾಗತೀಕರಣದಿಂದ ಸ್ಥಳೀಯ ಮಾರುಕಟ್ಟೆಗಳು ಜಾಗತಿಕ ಮಾರುಕಟ್ಟೆಗಳಾಗಿ ಸ್ಥಳೀಯ ಸ್ಪರ್ಧೆಯು ಜಾಗತಿಕ ಸ್ಪರ್ಧೆಯಾಗಿ ಮಾರ್ಪಡುತ್ತವೆ. ಇದರಿಂದ ಜಾಗತಿಕ ಗುಣಮಟ್ಟದ ಮತ್ತು ಶಕ್ತಿಯ ಹೂಡಿಕೆದಾರರು ಮಾತ್ರ ಈ ರಂಗದಲ್ಲಿ ಉಳಿಯಬಲ್ಲರು. ಹೀಗೆ ಮಾರುಕಟ್ಟೆಯಲ್ಲಿಯ ಈ ಸ್ಪರ್ಧೆಯಿಂದಾಗಿ ಕೊಳ್ಳುವವರಿಗೆ ಗುಣಮಟ್ಟದ ಸರಕುಗಳು ಕಡಿಮೆ ಬೆಲೆಯಲ್ಲಿ ಸಿಗುತ್ತವೆ, ಆದರೆ ಅದು ಉತ್ಪಾದಕರ ಮೇಲೆ ಅತಿಯಾದ ಒತ್ತಡವನ್ನು ಹೇರುತ್ತವೆ. ಸರಕುಗಳ ಬೆಲೆ ಕಡಿಮೆ ಮಾಡುವದು ಹೆಚ್ಚು ಜನ ಕೊಳ್ಳಬೇಕೆಂದೇ ಹೊರತು ಜನರಿಗೆ ಕಡಿಮೆ ಬೆಲೆಯಲ್ಲಿ ಸರಕುಗಳನ್ನು ಒದಗಿಸಿ ಮಾನವೀಯತೆ ಮೆರೆಯಬೇಕೆಂದಲ್ಲ. ಎಷ್ಟೇ ಆಗಲಿ ಅದೂ ವ್ಯಾಪಾರವೇ ! ಆದರೆ ಸಮಾಜದಲ್ಲಿ ಪ್ರತಿಯೊಬ್ಬನೂ ಕೊಳ್ಳುವವ ಮತ್ತು ಉತ್ಪಾದಕ ಎರಡೂ ಆಗಿರುವುದರಿಂದ ಅವನು ಇವೆರಡನ್ನೂ ಎದುರಿಸಬೇಕಾಗುತ್ತದೆ. ಹೀಗೆ ಪ್ರಬಲ ಶಕ್ತಿಗಳು ಮಾರುಕಟ್ಟೆಯಲ್ಲಿ ಉಳಿದು ಸಣ್ಣಪುಟ್ಟ ಮತ್ತು ಗುಡಿ ಕೈಗಾರಿಕೆಗಳು ನಾಮಾವಶೇಷವಾಗಿ ಹೋಗುತ್ತವೆ. ಆಗ ಏಕಶಕ್ತಿ ನಿಯಂತ್ರಿತ ಮಾರುಕಟ್ಟೆ ವ್ಯವಸ್ಥೆಯಿಂದಾಗಿ ಶೋಷಣೆ ಹೆಚ್ಚುತ್ತದೆ ಮತ್ತು ಜನ ಜೀವನ ದುರ್ಬರವಾಗುತ್ತದೆ. ಇಂಥ ಸನ್ನಿವೇಶದಲ್ಲಿ ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿ ಮುಂತಾದುವುಗಳು ಬೆಲೆಯಿಲ್ಲದ ಸರಕುಗಳಾಗಿ ಅಥವಾ ಅವಕ್ಕೂ ಮಾರುಕಟ್ಟೆ ಸಂಸ್ಕೃತಿಯ ಸೋಂಕು ತಗಲಿ ಮಾರಾಟದ ಸರಕುಗಳಾಗಿ ಪರಿಣಮಿಸುತ್ತವೆ.

ಹೀಗೆ ಮಾರುಕಟ್ಟೆ ಸಂಸ್ಕೃತಿಯು ಜನರಿಗೆ ಹಣದ ವ್ಯಾಮೋಹವನ್ನು ಸೃಷ್ಟಿಸಿ ಕೆಲಸ ಮಾಡಿಸುತ್ತದೆಯೇ ಹೊರತು ನಿಜವಾದ ಆಸಕ್ತಿಯಿಂದಲ್ಲ. ಹೀಗೆ ಎಲ್ಲವೂ ಮಾರಾಟಕ್ಕಿರುವ ಸಮಾಜದಲ್ಲಿ ಮೌಲ್ಯಗಳು ಹೇಗೆ ಬದುಕಬಲ್ಲವು? ಈ ಮಾರುಕಟ್ಟೆ ಸಂಸ್ಕೃತಿಯು ತನ್ನ ಭೌತಿಕವಾದದ ಮೂಲಕ ಬರೀ ಸಾಮಾಜಿಕ ಸ್ವಾಸ್ಥ್ಯವನ್ನಷ್ಟೇ ಅಲ್ಲ ಅದರ ಆಧ್ಯಾತ್ಮಿಕತೆ ಮತ್ತು ಅಂತಃಸತ್ವವನ್ನು ಕೊಲ್ಲುತ್ತದೆ. ಆತ್ಮತೃಪ್ತಿ ಮತ್ತು ಆತ್ಮಸಾಕ್ಷಿಯಿಂದ ಮಾಡುವ ಕೆಲಸವು ಮನುಷ್ಯನಿಗೆ ಸಮಾಧಾನ ಕೊಡುವುದಷ್ಟೇ ಅಲ್ಲ ಸಮಾಜಸೇವೆಗೂ ಮುಂದಾಗಿಸುತ್ತದೆ. ಮಾನವನಿಗೆ ಮೂಲಭೂತವಾಗಿರುವ ಸಂಬಂಧಗಳು, ಭಾವನೆಗಳು, ಬಯಕೆಗಳು ಮತ್ತು ಗುಣಗಳು ಅಭೌತಿಕವಾಗಿದ್ದು ಅವುಗಳೇನಾದರೂ ಮಾರುಕಟ್ಟೆ ಸಂಸ್ಕೃತಿಯ ಸೋಂಕಿಗೆ ಒಳಗಾದರೆ ಸರಕುಗಳಾಗಿ ಮಾರ್ಪಾಡಾಗಿ ವ್ಯಾಪಾರವೂ ಶುರುವಾಗುತ್ತದೆ. ಮಾರುಕಟ್ಟೆ ಆರ್ಥಿಕತೆಯ ಯಶಸ್ಸು ಸ್ಥಳೀಯ ಸಂಸ್ಕೃತಿಗಳ ಮತ್ತು ಅವುಗಳು ಅನುಸರಿಸುವ

ಮೌಲ್ಯಗಳ ಮೇಲೆ ಅವಲಂಭನೆಯಾಗಿರುತ್ತದೆ. ಮೌಲ್ಯಗಳಿಲ್ಲದ ಸಮಾಜದಲ್ಲಿ ಸ್ಪರ್ಧೆಯು ಯುದ್ಧವಾಗಿ ಪರಿಣಮಿಸುತ್ತದೆ. ಇಂಥ ಸಂದರ್ಭದಲ್ಲಿ ಜಾಗತೀಕರಣವು ಸಮಾಜದ ಒಳಿತಿಗೆ ಎಷ್ಟರ ಮಟ್ಟಿಗೆ ಅನುಕೂಲವಾಗುತ್ತದೆ ಯೆಂದು ನಾವೇ ನಿಷ್ಕರ್ಷಿಸಬೇಕಾಗುತ್ತದೆ.

ಮಾರುಕಟ್ಟೆ ಆರ್ಥಿಕತೆಯ ಒಟ್ಟಾರೆ (Gross) ಆರ್ಥಿಕ ಬೆಳವಣಿಗೆಗೆ ಕಾರಣವಾದರೂ ಲಾಭದ ಹಂಚಿಕೆ ಸಮಾಜ ದಲ್ಲಿ ಅಸಮಾನವಾಗಿರುತ್ತದೆ. ಇದರಿಂದ ಸಮಾಜದಲ್ಲಿ ಆರ್ಥಿಕ ಕಂದರಗಳು ನಿರ್ಮಾಣವಾಗುತ್ತವೆ. ಇಂಥ ಪರಿಸ್ಥಿತಿ ಯಲ್ಲಿ ಒಂದು ರಾಷ್ಟ್ರವು ರೂಪಿಸುವ ತನ್ನ ಆರ್ಥಿಕ ನೀತಿಯು ಸಾಮಾಜಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋಣದಿಂದ ತುಂಬಾ ಮಹತ್ವದ್ದಾಗಿರಬೇಕಾಗುತ್ತದೆ. ಉದಾಹರಣೆಗೆ ಕೃಷಿ ನೀತಿಯು ಇತರ ದೇಶದ ಮಾರುಕಟ್ಟೆಗಳ ಜೊತೆ ಸ್ಪರ್ಧಾತ್ಮಕವಾಗಿರ ಬೇಕಲ್ಲದೆ ರೈತರ ಹಿತವನ್ನು ಮತ್ತು ಅವರ ಸಾಮಾಜಿಕ ಭದ್ರತೆಯನ್ನು ಕಾಪಾಡಬೇಕಾಗುತ್ತದೆ. ಇಲ್ಲವಾದರೆ ಕೃಷಿ ವಲಯವು ಕುಸಿದು ರೈತರು ಕಂಗಾಲಾಗಿ ಆತ್ಮಹತ್ಯೆಗೆ ಶರಣಾಗಬೇಕಾಗುತ್ತದೆ. ಇದನ್ನು ಹೋಗಲಾಡಿಸಲು ಮಾರುಕಟ್ಟೆಯ ಮೇಲೆ ಸರಕಾರದ ನಿಯಂತ್ರಣ ನಿರ್ಣಾಯಕ ವಾಗಿರುತ್ತದೆ. ನಿಯಂತ್ರಿತ ಜಾಗತೀಕರಣದಿಂದ ಸಮಾಜದ ಎಲ್ಲ ವರ್ಗಗಳ ಹಿತ ಕಾಪಾಡಬಹುದು. ಸಾಮಾಜಿಕ ಸ್ವಾಸ್ಥ್ಯ ವನ್ನು ಗಟ್ಟಿಗೊಳಿಸಬಹುದು. ಈ ನಿಟ್ಟಿನಲ್ಲಿ ಜನರಲ್ಲಿ ನೈತಿಕ ಶಿಕ್ಷಣ, ನಾಗರಿಕ ಪ್ರಜ್ಞೆ, ಸಾಮಾಜಿಕ ಜವಾಬ್ದಾರಿ ಮತ್ತು ಕರ್ತವ್ಯಗಳ ಬಗ್ಗೆ ಅರಿವು ಮೂಡಿಸುವ ಪ್ರಯತ್ನ ನಡೆದಲ್ಲಿ ಒಳ್ಳೆಯ ಸುಸಂಸ್ಕೃತ ಸಮಾಜದ ನಿರ್ಮಾಣದತ್ತ ಹೆಜ್ಜೆಯಿಟ್ಟ ಂತಾಗುತ್ತದೆ. ಬಸವಣ್ಣನವರ ಕಲ್ಪನೆಯ 'ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ' ಸಮಾಜವಾಗುತ್ತದೆ. ☆

## ಉತ್ತರ

ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪ್ರಶ್ನೆಗಳಿಗೆ ಉತ್ತರ ಬರೆದು ಅಂಕಗಳಿಸಿರುತ್ತಾರೆ. ಈ ಪ್ರಶ್ನೆಗಳಿಗೆ ಉತ್ತರಗಳು ಮೊದಲೇ ಸಿದ್ಧವಾಗಿರುತ್ತವೆ. ಗುರುಗಳು ಪ್ರಶ್ನೆಗಳಿಗೆ ನಿಖರ ಉತ್ತರ ತಿಳಿಸಿರುತ್ತಾರೆ.

ಜೀವನದ ಅನೇಕ ಪ್ರಶ್ನೆಗಳಿಗೆ ಉತ್ತರ ಸಿಕ್ಕಬಹುದು, ಸಿಕ್ಕದಿರಬಹುದು. ಕೆಲವು ಪ್ರಶ್ನೆಗಳಿಗೆ ಕಾಲವೇ ಉತ್ತರ ನೀಡುತ್ತದೆ. ಸಿದ್ಧಾರ್ಥನಿಗೆ 3 ಪ್ರಶ್ನೆಗಳಿಗೆ ಉತ್ತರ ಬೇಕಾಗಿತ್ತು. ರೋಗ, ಮುಪ್ಪು ಮತ್ತು ಸಾವು. ಈ ಜಟಿಲ ಪ್ರಶ್ನೆಗಳಿಗೆ ಉತ್ತರ ಹುಡುಕತೊಡಗಿದ. ದೇಹದಂಡನೆ ಮಾಡಿದರೂ, ಊಟ, ನಿದ್ದೆ ತ್ಯಜಿಸಿ ಚಿಂತಿಸಿದರೂ ಸರಿ ಉತ್ತರ ಸಿಗಲಿಲ್ಲ. ಶರೀರ ಕೃಶವಾಯಿತು. ಎದೆ ಮೂಳೆಗಳ ಗೂಡಾಯಿತು. ಜ್ಞಾನೋದಯವಾಗಲಿಲ್ಲ. ಸತ್ಯಶೋಧನೆಯಲ್ಲಿ ಆಯಸ್ಸು ವಯಸ್ಸು ಕಳೆಯಿತು.

ಕೊನೆಗೆ ವೈಶಾಖ ಶುದ್ಧ ಪೂರ್ಣಿಮೆಯಂದು ಉತ್ತರ ದೊರಕಿತು. ಇದನ್ನೇ ಜ್ಞಾನೋದಯ ಎನ್ನುತ್ತಾರೆ. ಆದರೆ ಬುದ್ಧನು ಮನುಷ್ಯನ ದುಃಖಕ್ಕೆ ಉತ್ತರ ಸಿಕ್ಕಿತು ಎನ್ನುತ್ತಾನೆ. ತನಗೆ ಗೊತ್ತಿಲ್ಲದ ಪ್ರಶ್ನೆಗಳಿಗೆ ಉತ್ತರ ನೀಡುತ್ತಿರಲಿಲ್ಲ. ತನ್ನ ಅನುಭವಕ್ಕೆ ಬಂದ ವಿಷಯವನ್ನು ಪ್ರಸ್ತಾಪಿಸುತ್ತಿದ್ದನು.

ರೋಗ, ಮುಪ್ಪು ಮತ್ತು ಸಾವು ಪ್ರಕೃತಿ ನಿಯಮ, ಎಷ್ಟೇ ಕಾಳಜಿ ವಹಿಸಿದರೂ ಒಂದು ಹಂತದಲ್ಲಿ ಪ್ರತಿಯೊಬ್ಬ ವ್ಯಕ್ತಿಯನ್ನು ರೋಗ ಆವರಿಸುತ್ತದೆ. ಮುಪ್ಪು ಮತ್ತು ಸಾವು ಸ್ವಾಭಾವಿಕ. ಶೇ.5 ಮಂದಿ ಶತಾಯುಷಿಗಳಾಗಬಹುದು. ಹೆಚ್ಚೆಂದರೆ ನೂರಹತ್ತು, ಇಪ್ಪತ್ತು ವರ್ಷ ಬದುಕಬಹುದು ನಂತರ ಜಾಗ ಖಾಲಿ ಮಾಡಲೇಬೇಕಾಗುತ್ತದೆ. ಇವುಗಳ ಬಗ್ಗೆ ಚಿಂತಿಸಿ ಫಲವಿಲ್ಲ. ಎಷ್ಟು ದಿನ ಬದುಕಿದ್ದರೂ ಒಂದು ದಿನ ಸಾವು ಅಪ್ಪಿಕೊಳ್ಳುತ್ತದೆ. ಮುಪ್ಪು ಆವರಿಸುತ್ತದೆ, ದೇಹ ರೋಗಗಳ ಸಂಗಮವಾಗುತ್ತದೆ.

ಬುದ್ಧನಿಗೆ ತಪಸ್ಸಿನಿಂದ ಸಿಕ್ಕಿದ ಉತ್ತರ 'ಆಸೆಯೇ ದುಃಖಕ್ಕೆ ಮೂಲ'. ಸಾವು ಯಾರಿಗೂ ಪ್ರಿಯವಲ್ಲ. ಬದುಕಲು, ದೀರ್ಘಾಯುಷಿಗಳಾಗಲು ಎಲ್ಲಾ ಮಂತ್ರತಂತ್ರ ಗಳನ್ನು ಬಳಸಿಕೊಳ್ಳುತ್ತಾರೆ. ಹವನ ಹೋಮ ಮಾಡಿಸುತ್ತಾರೆ. ಆಯುಷ್ಯ ಹೋಮ, ಮೃತ್ಯುಂಜಯ ಜಪ ಮಾಡಿಸುತ್ತಾರೆ. ಇವುಗಳಿಂದ ಸಾವನ್ನು ತಡೆಗಟ್ಟುವುದು ಸಾಧ್ಯವಿಲ್ಲ.

ವಯಸ್ಸಾದ ಮೇಲೂ ದುರಾಸೆಯ ಬೆನ್ನುಹತ್ತಿ, ಹಠ, ಛಲ ಸಾಧಿಸುತ್ತಾ ಜೀವ ಬಿಡುವುದು ಸಾಧುವಲ್ಲ. ಸ್ಥಿತ ಪ್ರಜ್ಞತೆಯಿಂದ ಬಹುಕಾಲ ಬಾಳಲು ಸಾಧ್ಯ. ಜೀವನದ ಗುರಿ ಬದುಕನ್ನು ಸಾರ್ಥಕ ಪಡಿಸಿಕೊಳ್ಳುವುದು. ಎಲ್ಲರನ್ನೂ ಗೌರವಿಸುವುದು, ಎಲ್ಲರಿಂದ ಗೌರವ ಸ್ವೀಕರಿಸುವುದು. ಕೈಲಾದರೆ ಸಹಾಯ, ಸಹಕಾರ ಅನ್ಯರಿಗೆ ನೀಡುವುದು, ಇಲ್ಲದಿದ್ದರೆ ತಮ್ಮ ಪಾಡಿಗೆ ತಾವಿರುವುದು.

ಗೌತಮನ ಉಪದೇಶ ಅನೇಕರ ಮೇಲ ಪ್ರಭಾವ ಬೀರಿತು. ಅನೇಕರ ಪ್ರಶ್ನೆಗಳಿಗೆ ಉತ್ತರ ಸಿಕ್ಕಿತು. ಬುದ್ಧನಿಗೆ ಅನುಯಾಯಿಗಳಾದರು. ಗಿಡಮರಗಳಿಗೂ ವಯಸ್ಸಾಗುತ್ತದೆ. ಪ್ರಾಣ ಪಕ್ಷಿಗಳಿಗೂ ಅಷ್ಟೆ ಹುಟ್ಟು ಇರುವ ಕಡೆ ಸಾವು ಇರುತ್ತದೆ, ನೋವು ನಲಿವುಗಳಿರುತ್ತದೆ, ಸುಖ ದುಃಖಗಳಿರುತ್ತದೆ.

–ಕೆ.ಎನ್.ಸ್ವಾಮಿ
ದಾವಣಗೆರೆ.





## ನಿಮಗೆ ಗೊತ್ತಿದೆಯೇ?

–ಶ್ರೀಮತಿ ಬಿ.ಜಿ. ಪಂಚರತ್ನ,

* ವಿಷವನ್ನು ತಿನ್ನಬಲ್ಲ 'Macaws' ಎಂಬ ಪ್ರಾಣಿಯು ಈ ಭೂಗೋಳದಲ್ಲುಂಟು. Anthrax ವಿಷಸೇವನೆ ಮಾಡಬಲ್ಲ ಕೆಲವು ಪಕ್ಷಿಗಳೂ ಈ ಭೂಖಂಡದಲ್ಲಿ ರಾರಾಜಿಸುತ್ತಿವೆ! ಆದರೆ ನಂಜು ನುಂಗುವ ಈ ಪಕ್ಷಿಗಳು ಅತಿ ವಿರಳ.

* ಒಂದು ಅಚ್ಚರಿಯ ಚಪ್ಪಡಿ ಕಲ್ಲಿದೆ. ಕಂದು ಮಿಶ್ರಿತ ಸುಣ್ಣದ ಈ ಚಪ್ಪಡಿಗಲ್ಲು 1446ರಿಂದಲೂ Ireland ದೇಶದ ಬ್ಲೇರ್ನಿ ಎಂಬ ಸ್ಥಳದಲ್ಲಿದೆ. ಇದರ ಹಿನ್ನಲೆ ಕಥೆಯಿದೆ. ಯಾರು ಈ ಕಲ್ಲನ್ನು ಮುತ್ತಿಡುವರೊ ಅವರಿಗೆ ಮಾತಿನ ಚಮತ್ಕಾರ ವರಸಿದ್ಧಿಯಾಗುವುದಂತೆ! ನಿಮಗೂ ಆಸೆಯಾಗುತ್ತಿರಬೇಕು. ಆದರೆ ಇದು ಸುಲಭದ ಕೆಲಸವಲ್ಲ. ನೀವು ಬೆನ್ನು ಕೆಳಗೆ ಮಾಡಿ ಈ ಕಿಂಡಿಯೊಳಗೆ ನುಸುಳಬೇಕು. ಉದ್ದಕ್ಕೂ ಮುಖಮಾಡಿ ಇಕ್ಕಟ್ಟಿನಲ್ಲೇ ಸರಿಯುತ್ತಾ ಈ ಕಲ್ಲನ್ನು ಚುಂಬಿಸಬೇಕು. ಈ ಸಮಯಕ್ಕೆ ಸರಿಯಾಗಿ ಯಾರಾದರೊಬ್ಬರು ಫಟ್ಟೆಂದು ಗಟ್ಟಿಯಾಗಿ ನಿಮ್ಮನ್ನು ಹಿಡಿದುಕೊಳ್ಳಬೇಕು. ಇಲ್ಲದ ಪಕ್ಷದಲ್ಲಿ ನೀವು ದಪ್ಪೆಂದು ಬೀಳುವಿರಿ.

* ಯುಎಸ್‌ಎ ಮತ್ತು ರಷ್ಯಾದ ನಂತರ ಮಾನವನನ್ನು ಅಂತರಿಕ್ಷಕ್ಕೆ ಕಳುಹಿಸಿದ ದೇಶವೆಂದರೆ ಅದು ಚೀನಾ! ಅಕ್ಟೋಬರ್ 2003ರಂದು.

* ದೆಹಲಿಯಲ್ಲಿರುವ ದೊಡ್ಡ ಆಲಯಗಳ ಸಮೂಹವೆಂದರೆ ಅದು ಅಕ್ಷರಧಾರಮ. ಇದು ಅತಿ ಸುಂದರವಾಗಿಯೂ ಕಲಾತ್ಮಕವಾಗಿಯೂ ಇದೆ. ಗುಲಾಬಿ ಮತ್ತು ಶ್ವೇತ ಬಣ್ಣದ ಅಮೃತಶಿಲೆಗಳಿಂದ ಈ ಸಮೂಹವು ನಿರ್ಮಾಣವಾಗಿದೆ. ಸುಮಾರು 200 ಕೋಟಿ ರೂ. ವೆಚ್ಚದಲ್ಲಿ ಅರಳಿರುವ ಈ ಆಲಯವು 148 ಆನೆಗಳು ಹೊತ್ತಿಕೊಂಡು ನಿಂತಂತೆ ವಿನ್ಯಾಸಿಸಲಾಗಿದೆ. 243 ಸ್ತಂಭಗಳು, 20 ಚತುಷ್ಕೋಣ ಆಕಾರದ ಶಿಖರಗಳು 20 ಸಾವಿರ ಪ್ರತಿಮೆಗಳು! 138 ವಿವಿಧ ಶೈಲಿಯ ಬಾಗಿಲುಗಳು ಈ ಸಮೂಹದಲ್ಲಿ ಕಂಗೊಳಿಸುತ್ತಿವೆ. ಈ ನಿರ್ಮಾಣದಲ್ಲಿ ಅತ್ಯಾಧುನಿಕ ಕಾಮಗಾರಿ, ವಾಸ್ತು ವಿಜ್ಞಾನ, ತಂತ್ರಶಿಲ್ಪ (Technology) ಬೃಹತ್‌ಗಳ ಅನ್ವಯಿಕೆಯಾಗಿದೆ. ಇದು ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವ, ಸಾರಿ ಹೇಳುವ ಮಂದಿರವೂ ಆಗಿದೆ.

ಭಕ್ತ ಬಾಂಧವರಿಗೆ, ಶಿಲ್ಪಿಗಳಿಗೆ, ಪ್ರಕೃತಿ ಪ್ರಿಯರಿಗೆ, ವಾಸ್ತು ವಿಜ್ಞಾನ, ವಿನ್ಯಾಸದ ಅಧ್ಯಯನಕಾರರಿಗೆ, ಸಂಶೋಧಕರು, ವಿದ್ಯಾರ್ಥಿಗಳಿಗೆ, ಅಪ್ಪಟ ಭಾರತೀಯ ಸಂಸ್ಕೃತಿ ಆರಾಧಕರಿಗೆ ಇದು ಬಹು ಪ್ರಿಯವಾದ ತಾಣ.

ಈ ಅಕ್ಷರಧಾಮ ಜ್ಞಾನ, ವಿಜ್ಞಾನ, ಕಲೆ, ಪುರಾಣ, ವರ್ತಮಾನ, ಕುಸುರಿಕೆಲಸ, ವೈವಿಧ್ಯಮಯ ಅಲಂಕಾರ, ವೈಭವೋಪೇತಗಳ ಸುಂದರ ಸಂಗಮ ಸ್ಥಳ.

* 'ಲೈಕಾ' ಎಂಬ ನಾಯಿಯನ್ನು ಮೊಟ್ಟ ಮೊದಲು ಅಂತರಿಕ್ಷ ಯಾತ್ರೆಗೆ ಕಳುಹಿಸಲಾಯಿತು. ಆದರೆ ಅದು ಭೂಮಿಗೆ ಹಿಂದಿರುಗಲಿಲ್ಲ. ಆಕಾಶದ ಹಾದಿಯಲ್ಲೇ ಉರಿದು ಭಸ್ಮವಾಯಿತು.

* ಚಂದ್ರನಿಂದಲೂ ನೋಡಬಹುದಾದ ಏಕೈಕ ಜಗತ್ಪ್ರಸಿದ್ಧ ಭೂ ಅಚ್ಚರಿಯೆಂದರೆ ಅದು ಚೀನಾದ ಮಹಾಗೋಡೆ! Great wall of China ಬಹುರಾಜ ಮನೆತನದವರು ಅದನ್ನು ಕಟ್ಟಿದರು.

ಚೀನಾವು ಅನೇಕ ಪ್ರಥಮಗಳಲ್ಲಿ ದಾಖಲೆ ಸ್ಥಾಪಿಸಿದೆ. ಕಾಗದ, ದಿಕ್ಸೂಚಿ ಮುದ್ರಿಸುವ ತಂತ್ರ ಮೊದಲಾದುವನ್ನು ಅವರು ಪ್ರಪ್ರಥಮವಾಗಿ ಕಂಡು ಹಿಡಿದರು.

* ಲೇಸರ್ ಅತ್ಯಂತ ತೀಕ್ಷ್ಣವಾದ ಶಕ್ತಿಶಾಲೀ ಪ್ರಕಾಶವಾಗಿದೆ. ಭೂಮಿಯ ಮೇಲಿಟ್ಟ ಕೇವಲ 40 ವ್ಯಾಟ್‌ಗಳ ಲೇಸರ್ ದೀಪವನ್ನು ನಾವು ಚಂದ್ರ ಗ್ರಹದಿಂದಲೂ ವೀಕ್ಷಿಸಬಹುದು. ಆದರೆ ಇಡೀ ನಗರವನ್ನೇ ವಿದ್ಯುತ್ ಬೆಳಕಿನಿಂದ ಉರಿಸಿದರೂ ಆ ಬೆಳಕು ಚಂದ್ರ ಗ್ರಹದಿಂದ ನೋಡಲು ಸಾಧ್ಯವಾಗದು.

* ಸಸ್ಯಾಹಾರಕ್ಕಿಂತಲೂ ಮಾಂಸಾಹಾರದಲ್ಲಿ 14 ಪಟ್ಟು ಅಧಿಕ ಕ್ರಿಮಿನಾಶಕ ರಸಾಯನಿಕ ಸಂಗ್ರಹವಿದೆ. ಕ್ಷೀರ ಉತ್ಪನ್ನಗಳಲ್ಲಾದರೋ ಇದು 5 ಪಟ್ಟು ಅಧಿಕ. ಈ ರಸಾಯನಿಕ ಮಾನವನ ದೇಹಕ್ಕೆ ಹಾನಿಕಾರಕವಷ್ಟೇ. ಆದ್ದರಿಂದ ಜನರು ಹೆಚ್ಚು ಹೆಚ್ಚಿ ಸಸ್ಯಾಹಾರಗಳ ಮೊರೆ ಹೋಗುವುದೇ ಲೇಸು. ತರಕಾರಿ, ಸೊಪ್ಪುಗಳನ್ನು ಅಧಿಕವಾಗಿ ಬಳಸಿ ಆರೋಗ್ಯವನ್ನು ಕಾಪಾಡಿಕೊಳ್ಳಿ.

* 'ನಾರ್ವೆ' ದೇಶವನ್ನು 'ಮಧ್ಯರಾತ್ರಿ ಸೂರ್ಯನ ನಾಡು' ಎಂತಲೆ ಕರೆಯುತ್ತಾರೆ. ಏಕೆಂದರೆ ಇಲ್ಲಿ ಸೂರ್ಯನು ಮಧ್ಯರಾತ್ರಿಯಾದರೂ ದೂರದಲ್ಲಿ ದಿಗಂತದಲ್ಲಿ ಕೊಂಚ ಪ್ರಕಾಶಿಸುತ್ತಲೇ ಇರುತ್ತಾನೆ!.

* ಹುಲಿ ಹಾಗೂ ಸಿಂಹಗಳು ನೋಡಲು ಬೇರೆ ಬೇರೆಯಾದರೂ ಅವು ಹತ್ತಿರದ ಸಂಬಂಧಿಗಳು. ಹುಲಿ ಸಿಂಹದಂತೆ ಗುಂಪಿನಲ್ಲಿ ವಾಸಿಸುವುದಿಲ್ಲ. ಬದಲಾಗಿ ಅರಣ್ಯದಲ್ಲಿ ಗವಿ, ಗುಹೆ, ಬಂಡೆಗಳಲ್ಲಿ ಅಡಗಿಕೊಂಡಿರುವುದೇ ಹೆಚ್ಚು. ಸಿಂಹಗಳು ತೆರೆದ ಪ್ರದೇಶಗಳಲ್ಲಿ ಕಂಡು ಬಂದರೆ ಹುಲಿಗಳಾದರೂ ದಟ್ಟವನಗಳಲ್ಲಿ ವಾಸವಾಗಿರುವುವು.

* ಈಗ ಮತ್ತೆ ಚೀನಾಕೆ ಬರೋಣ. ಇಲ್ಲೊಬ್ಬ ಅಸಾಧಾರಣ ಮನುಷ್ಯನಿದ್ದಾನೆ. 55 ವರ್ಷದ ಈತನ ಹೆಸರು Weiolingtong ಎಂದು 'Guangxi' ರಾಜ್ಯದಲ್ಲಿನ 'Guilin' ಎಂಬ ನಗರದಲ್ಲಿ ಈತ ವಾಸವಾಗಿದ್ದಾನೆ. ಇಲ್ಲಿನ ಫ್ಯಾಕ್ಟರಿಯೊಂದರಲ್ಲಿ ಕೆಲಸ ಮಾಡುತ್ತಿದ್ದಾನೆ. ಈತ ತನ್ನ ಕಿವಿಗಳಿಂದಲೇ ಮೊಂಬತ್ತಿಗಳನ್ನು ಆರಿಸುತ್ತಾನೆ!. ಕಳೆದ 30 ವರ್ಷಗಳಿಂದಲೂ ತನ್ನ ಕಿವಿಗಳಿಂದ ಗಾಳಿ ಬರುವುದನ್ನು ಈತ ಕಂಡು ಕೊಂಡಿದ್ದನು. ಈತನು ಕ್ರಿಯಾಶೀಲ ಹಾಗೂ ಆಶಾವಾದಿ. ಕಿವಿಯಿಂದ ಕೊಳವೆಯ ಸಹಾಯದಿಂದ ಬಲೂನ್ ಊದಲು, ಮೊಂಭತ್ತಿಗಳನ್ನು ಆರಿಸಲು ಅಭ್ಯಾಸ ಮಾಡಿ ಕೊಂಡ. ಪಾರ್ಟಿ, ಔತಣ ಕೂಟ ಮೊದಲಾದೆಡೆ ಸಮಾರಂಭಗಳಲ್ಲಿ ಅವನು ಈ ಮ್ಯಾಜಿಕ್ ಮಾಡುತ್ತಿದ್ದಾನೆ. ಒಂದು ಸಮಾರಂಭದಲ್ಲಿ 20 ಕ್ಷಣಗಳಲ್ಲಿ 20 ಮೊಂಬತ್ತಿಗಳನ್ನು ಆರಿಸಿರುವುದು ಈತನ ಇತ್ತೀಚಿನ ದಾಖಲೆಯಂತೆ!.

☆

## ಮಾಡಿದ್ದೆಲ್ಲಾ ಮರೆತು, ದೇವರದೇ ಎಂಬ ಭಾವನೆ ಇರಬೇಕು

*ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ*
*ಏಡಿಸಿ ಕಾಡಿತ್ತು ಶಿವನ ಡಂಗುರ,*
*ಮಾಡಿದೆನೆನ್ನದಿರಾ ಲಿಂಗಕ್ಕೆ,*
*ಮಾಡಿದೆನ್ನದಿರಾ ಜಂಗಮಕ್ಕೆ*
*ಮಾಡಿದೆನೆಂಬುದು ಮನದಲ್ಲಿಲ್ಲದಿದ್ದಡೆ*
*ಬೇಡಿತ್ತ ನೀವ ಕೂಡಲಸಂಗಮದೇವ*

–ಬಸವಣ್ಣನವರು

ಒಬ್ಬರು ದಾನ ಮಾಡುತ್ತಾರೆಂದರೆ ಅವರ ಹೃದಯದ ಒಳಗೆ ಕುಳಿತು ಪರಮಾತ್ಮ ದಾನ ಮಾಡಿಸುವನಾದುದರಿಂದ, ನಾವು ಕೃತಜ್ಞರಾಗಿರಬೇಕಾದುದು ಪರಮಾತ್ಮನಿಗೆ ಹೊರತು ದಾನಿಗಳಿಗಲ್ಲ. ಪರಮಾತ್ಮನೇ ಅವರಿಗೆ ಸಾಕಷ್ಟು ಧನಕನಕ ಕೊಟ್ಟಿರದಿದ್ದರೆ ಅವರೆಲ್ಲಿಂದ ಕೊಡುತ್ತಿದ್ದರು? 'ಧನವಿದ್ದರೇನು ದಯವಿಲ್ಲದನ್ನಕ್ಕ!' ಎಂಬಂತೆ ಧನವಂತರು ದಯವಂತರಾಗಿರಬೇಕು. ಅಹಂಕಾರಿಗಳಾಗಿರಬಾರದು. ದಾನಿಗಳು ಹಣ, ಭೂಮಿ, ಏನೇ ಕೊಡಲಿ, ಅದು ಪರಮಾತ್ಮನ ಸೃಷ್ಟಿಯಲ್ಲವೆ? ಆದರೆ ದಾನಿಗಳು ಹಾಗೆ ತಿಳಿದುಕೊಳ್ಳುವುದಿಲ್ಲ. ದಾನಿಗಳು ವಿನಯಪರರಾದಷ್ಟು, ಮೌನ ತಾಳಿದಷ್ಟು, ತನ್ನ ಸೇವೆಗೆ ಮನ್ನಣೆ ದೊರೆಯುತ್ತದೆಯೆಂಬ ಕಲ್ಪನೇ ಅವರಿಗೆ ಬರುವುದೇ ಇಲ್ಲ. ಪರಮಾತ್ಮನಿಗೆ ಎಲ್ಲವೂ ಗೊತ್ತು. ಕೊಡಲಿಕ್ಕೂ ಗೊತ್ತು. ಕಸಿದುಕೊಳ್ಳಲಿಕ್ಕೂ ಗೊತ್ತು. ಬೇಡಿದ್ದನ್ನು ಕೊಡುವಂತೆ ಕೊಟ್ಟುದನ್ನು, ದುರುಪಯೋಗಪಡಿಸಿಕೊಂಡರೆ ಕಾಡಲಿಕ್ಕೂ ಗೊತ್ತು. ದೇವರು ಮನಸ್ಸು ಮಾಡಿದರೆ ಒಂದು ದೊಡ್ಡ ಪ್ರವಾಹವು, ಒಂದೇ ಒಂದು ರಾತ್ರಿಯಲ್ಲಿ ಕೆರೆಯನ್ನು ತುಂಬಿಸಿದಂತೆ, ಅವರ ಮನೆಯನ್ನು ಅರಸು ಪರಿವಾರ ಕೈವಾರ ಸಹಿತ ತುಂಬಿಸುತ್ತಾನೆ. ಅದೇ ದೇವರು ಒಮ್ಮೆ ಮರೆತೆನೆಂದರೆ ತುಂಬಿದ ಹರವಿಗೆ ತೂತುಬಿಟ್ಟಾಗ ಅದು ಸಪ್ಪಳಿಲ್ಲದೆ ಖಾಲಿಯಾಗುವ ರೀತಿಯಲ್ಲಿ ಮನೆಯಲ್ಲಿ ಬರಿದಾಗಿ ಬಿಡುತ್ತದೆ. ಅದಕ್ಕಾಗಿ ದೇವರ, ಗುರು ಹಿರಿಯರ, ಸಮಕ್ಷಮದಲ್ಲಿ ಎಂದೂ ಅಹಂಕಾರಪಡಬಾರದು. ಎಲ್ಲವೂ ಪರಮಾತ್ಮನದೆ ಇದೆಯೆಂಬ ವಿನೀತ ಭಾವನೆ ಇರಬೇಕು. ದೇವರಿಗೆ, ಸಮಾಜಕ್ಕೆ ಮಾಡಿದ ಉಪಕಾರವನ್ನು ಹೇಳಿಕೊಳ್ಳಬಾರದು. ಕೊಟ್ಟದ್ದು ಮರೆಯಬೇಕು. ಮಾಡಿದ್ದು ಮನಸ್ಸಿನಲ್ಲಿ ಸಹ ಉಳಿಯಬಾರದು. ಮರೆಯಬೇಕು. ದಾನಗುಪ್ತವಾಗಿರಬೇಕು. ಭಕ್ತಿ ಬಯಲಾಗಬಾರದು. ಬರುವಾಗ ನಾವು ಏನೂ ತಂದಿಲ್ಲ, ಹೋಗುವಾಗ ಏನೂ ಒಯ್ಯುವುದಿಲ್ಲ. ನಡುವೆ ಬಂದ ಸಂಪತ್ತು ದೇವರದೇ ಇರುತ್ತದೆ. ಆ ಸಂಪತ್ತಿಗೆ ನಾವು ಮಾಲೀಕರಲ್ಲ. ಕೇವಲ ಮೇಲ್ವಿಚಾರಕರು, ಧನ ಮದ ಒಳ್ಳೆಯದಲ್ಲ ಬಡತನವೆಂಬ ಮಂತ್ರವಾದಿ ಬಂದರೆ ಹೇಳ ಹೆಸರಿಲ್ಲದಂತೆ ಹೋಗುತ್ತದೆ. ನಾವು ಏನು ಮಾಡಿದರೂ, ವಿನೀತರಾಗಿ ಮಾಡಬೇಕು. ವಿನಯಶಾಲಿಯೇ ವಿಜಯಶಾಲಿ. ಸದುವಿನಯವೇ ಸದಾಶಿವ ನೊಲಿಮೆ, ಈ ಸದ್ಭಾವನೆಯೇ ಮಾನವನನ್ನು ಉನ್ನತಸ್ಥಾನಕ್ಕೆ ಕೊಂಡೊಯ್ಯುತ್ತದೆ.





# ಪ್ರಪ್ರಥಮ ಆಧುನಿಕ ವಚನಕಾರ ಪಂಡಿತ ಡಾ॥ ಎಂ.ಎನ್. ಗಾಂವಕರ್

–ಡಾ॥ ಕೆ.ಎಸ್. ರತ್ನಮ್ಮ, ೨೮೮೪, ಕೋರ್ಟ್ ಹಿಂಭಾಗ, ಸರಸ್ವತಿಪುರಂ, ಮೈಸೂರು.

ಸಮಕಾಲೀನ ಹೊಸ ಕಾವ್ಯ ಪ್ರವಾಹದೊಡನೆ ಉಪವಾಹಿನಿಯಾಗಿ ಆಧುನಿಕ ವಚನ ಸಾಹಿತ್ಯ ಪ್ರಕಾರ ವೈವಿಧ್ಯಮಯವಾಗಿ ೨೧ನೆಯ ಶತಮಾನದಲ್ಲೂ ಮುನ್ನಡೆದಿದೆ. ವಚನ ಸಾಹಿತ್ಯವು ವಿಶಿಷ್ಟ ಪ್ರಕಾರವಾಗಿ ಜನಮಾನಸವನ್ನು ಸ್ಪಂದಿಸುವ ಯಶಸ್ಸು ಪಡೆದಿವೆ. ೨೦ನೆಯ ಶತಮಾನದಲ್ಲಿ ವಚನ ಸಾಹಿತ್ಯದ ತೃತೀಯ ಘಟ್ಟ ಆರಂಭವಾಗಿದೆ. ೧೦-೧೧ನೆಯ ಶತಮಾನಗಳಲ್ಲಿ ಕಿರುತೊರೆಯಾಗಿ ಆರಂಭವಾಗಿ ೧೨ನೆಯ ಶತಮಾನದ ವೇಳೆಗೆ ಮಹಾಪ್ರವಾಹವಾಗಿ ಕಾವ್ಯ ವಾರಿಧಿಯಲಿ ಒಂದಾದದ್ದು ವಚನ ಸಾಹಿತ್ಯದ ಮೊದಲ ಘಟ್ಟ. ವಚನ ಸಾಹಿತ್ಯ ಮತ್ತೆ ೧೫ನೆಯ ಶತಮಾನದಲ್ಲಿ ಸಿದ್ಧಲಿಂಗೇಶ್ವರರು ಮತ್ತು ಅವರ ಶಿಷ್ಯರ ಮೂಲಕ ವಚನ ಸಂಗ್ರಹಣೆ, ಸಂಕಲನ, ಪರಿಷ್ಕರಣೆಗಳ ಮೂಲಕ ಹದಿನೇಳನೆಯ ಶತಮಾನದ ಶೂನ್ಯಸಂಪಾದನಕಾರರು ಮತ್ತು ಸ್ವರವಚನಕಾರರ ನಿರಂತರ ಇಚ್ಛಾಶಕ್ತಿಯಿಂದ ದ್ವಿತೀಯ ಘಟ್ಟವಾಗಿ ಮುನ್ನಡೆಯಿತು. ವಚನ ಸಾಹಿತ್ಯದ ತೃತೀಯ ಘಟ್ಟವಾಗಿ ಆಧುನಿಕ ಕಾಲದಲ್ಲಿ ೨೦ನೆಯ ಶತಮಾನದಲ್ಲಿ ಆರಂಭವಾಗಿ ೨೧ನೆಯ ಶತಮಾನಕ್ಕೂ ಪ್ರವಹಿಸುತ್ತಿರುವುದು ವಚನ ಸಾಹಿತ್ಯ. ವಚನ ಸಾಹಿತ್ಯ ಬತ್ತಲಾರದ ಗಂಗೆ ಎಂಬುದನ್ನು ದೃಢಪಡಿಸುತ್ತದೆ. ಹೀಗೆ ವಚನ ಸಾಹಿತ್ಯ ಪರಂಪರೆ ಕನ್ನಡ ಸಾಹಿತ್ಯಕ್ಕೆ ಸಮರ್ಥವೂ ಸತ್ವಭರಿತವೂ ಆದ ಗಟ್ಟಿದನಿಯಾಗಿ ಸಮಾಜಕ್ಕೆ ಮಾರ್ಗ ದರ್ಶಕವಾಗಿದೆ.

ಅಧುನಿಕ ವಚನಯುಗ ೧೯೬೨ರಲ್ಲಿ ಹರ್ಡಿಕರ್ ಮಂಜಪ್ಪನವರಿಂದ ಆರಂಭವಾಯಿತು. ಅವರು 'ಪ್ರಭುದೇವ' ಅಂಕಿತದಲ್ಲಿ 'ಜನಸೇವಕನ ವಚನಗಳು ಎಂಬ ಕೃತಿಯನ್ನು ಪ್ರಕಟಿಸುವುದರ ಮೂಲಕ ಆಧುನಿಕ ವಚನಸಾಹಿತ್ಯದ ಆದ್ಯ ವಚನಕಾರರು ಎಂಬುದು ಇಲ್ಲಿಯವರೆಗೂ ದೃಢಪಟ್ಟಿದ್ದ ಸಂಗತಿ. ಆದರೆ ೧೯೨೫ರಲ್ಲಿ ಡಾ॥ ಎಂ.ಎನ್. ಗಾಂವಕರ ಅವರು ಸಮಾಜೋದ್ಧಾರಕ, ಜ್ಞಾನಬೋಧಕವಾದ ವಿಚಾರಗಳನ್ನು ವಚನರೂಪದಲ್ಲಿ ರಚಿಸಿದ ಸಂಗತಿ ಬೆಳಕಿಗೆ ಬಂದಿದೆ. 'ಮೃಕಂಡು' ಅಂಕಿತದಲ್ಲಿ ಅವರು ವಚನ ಸಂಕಲನವನ್ನು ಪ್ರಕಟಿಸಿದ್ದ ಸಂಗತಿ ತಿಳಿದುಬಂದರೂ ಆ ಕೃತಿ ಲಭ್ಯವಾಗದೆ, ಅವರ ಒಂದು ವಚನ ಮಾತ್ರ ದೊರೆತಿದೆ. ಅವರು ೧೯೨೯ರಲ್ಲಿ 'ಜ್ಞಾನಪದ್ಯಮಾಲಾ' ಎಂಬ ಪದ್ಯಸಂಕಲನವನ್ನು ಪ್ರಕಟಿಸಿರುವುದು ಲಭ್ಯವಿದೆ. ಇದನ್ನು ಹುಬ್ಬಳ್ಳಿಯಲ್ಲಿರುವ ಆಧುನಿಕವಚನಕಾರ್ತಿ ಹಾಗೂ ಶ್ರೀಮತಿ ಸೀತಾ ಜಿ. ಗಾಂವಕರ ಅವರು ೧೯೬೩ರಲ್ಲಿ ದ್ವಿತೀಯ ಮುದ್ರಣವಾಗಿ ಪ್ರಕಟಿಸಿದ್ದಾರೆ. (ಈ ವಿಷಯವನ್ನು ನನಗೆ ತಿಳಿಸಿದ್ದು ಈ ಲೇಖನಕ್ಕೆ ಸ್ಫೂರ್ತಿ ನೀಡಿದೆ.)

ಎಂ.ಎಸ್. ಗಾಂವಕರ ಅವರ ಪೂರ್ಣ ಹೆಸರು ಮುರ್ಕುಂಡಿ ನಾರಾಯಣಪ್ಪ ಗಾಂವಕರ. ಇವರು ಹುಬ್ಬಳ್ಳಿಯಲ್ಲಿ ವಾಸವಾಗಿದ್ದು 'ಶ್ರೀ ಸಮರ್ಥ ಕರ್ನಾಟಕ ಆಯುರ್ವೇದಿಕ ಫಾರ್ಮಸಿಯನ್ನು ನಡೆಸುತ್ತಾ ವೈದ್ಯ ವೃತ್ತಿಯಲ್ಲಿದ್ದರು. ಇವರು ಉತ್ತರ ಕನ್ನಡ ಜಿಲ್ಲೆಯ ಕುಮುಟಾ ತಾಲ್ಲೂಕಿನ ಹಿರೇಗುತ್ತಿ ಗ್ರಾಮದ ಸುಸಂಸ್ಕೃತ ಮನೆತನದಲ್ಲಿ ಕ್ರಿ.ಶ. ೧೮೯೦ರಲ್ಲಿ ಜನಿಸಿದರು. ತಮ್ಮ ಊರಿನಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿ ಧಾರವಾಡದ ಸರಕಾರಿ ಟ್ರೈನಿಂಗ ಕಾಲೇಜಿನಲ್ಲಿ ತರಬೇತಿ ಪಡೆದು ಕನ್ನಡ ಶಾಲೆಯ ಶಿಕ್ಷಕರಾದರು. ಆಂಕೋಲಾ, ಕಾರವಾರ ಮೊದಲಾದ ಕಡೆ ಸೇವೆ ಸಲ್ಲಿಸಿದರು. ಆಯುರ್ವೇದ ವೈದ್ಯಕೀಯದ ವಿಶೇಷ ಒಲವು ಹೆಚ್ಚಿ ಇವರು ಶಿಕ್ಷಕ ವೃತ್ತಿಗೆ ರಾಜಿನಾಮೆ ನೀಡಿ ವೈದ್ಯವೃತ್ತಿಯನ್ನೇ ಕೈಗೊಂಡರು. ಇದಕ್ಕೆ ಮುಖ್ಯ ಪ್ರೇರಕರು ಅವರ ಆತ್ಮೀಯ ಸ್ನೇಹಿತರಾಗಿದ್ದ ಶ್ರೀ ನಿತ್ಯಾನಂದ ಸ್ವಾಮೀಜಿಯವರು. ಧಾರವಾಡ, ಹುಬ್ಬಳ್ಳಿ, ಗದಗ, ದಾವಣಗೆರೆ ಮೊದಲಾದ ಕಡೆ ವೃತ್ತಿ ಜೀವನ ನಡೆಸಿ ಪ್ರಸಿದ್ಧರಾಗಿ ಹಣ ಹಾಗೂ ಒಳ್ಳೆಯ ಹೆಸರನ್ನು ಗಳಿಸಿದರು. ಮುಂದೆ ಶ್ರೀ ನಿತ್ಯಾನಂದ ಸ್ವಾಮಿಗಳು ಮುಂಬಯಿ ಹತ್ತಿರದ ವಜ್ರೇಶ್ವರಿಗೆ ಹೋಗಿ ನೆಲೆಸಿದ ನಂತರ ಇವರೂ ಮುಂಬಯಿಗೆ ಹೋದರು.

ಪಂಡಿತ ಗಾಂವಕರ ಅವರು ಉತ್ತರ ಕನ್ನಡ ಜಿಲ್ಲೆಯ 'ನಾಡವರ' ಎಂಬ ಸಮಾಜಕ್ಕೆ ಸೇರಿದವರು. ಆ ಪ್ರಾಂತ್ಯದಲ್ಲಿ ನಲವತ್ತು ಹಳ್ಳಿಗಳಿದ್ದ ಈ ಸಮಾಜದ ತರುಣರನ್ನು ಸಾಮಾಜಿಕ ಸೇವೆಗಾಗಿ ನವಜಾಗೃತಿ ಉಂಟು ಮಾಡಿ, ನಾಡವರ ನವ ಚೇತನ ತರುಣಸಂಘವನ್ನು ಕಟ್ಟಿದ್ದರು. ಅದರ ಧ್ಯೇಯೋದ್ದೇಶ ಗಳನ್ನು 'ಜ್ಞಾನಪದ್ಯಮಾಲಾ' ಎಂಬ

ಹೆಸರಿನಿಂದ ಹುಬ್ಬಳ್ಳಿಯ ವ್ಹಿ.ಸಿ. ಚಿಟಗುಪ್ಪಿ ಅವರ ಮುದ್ರಣಾಲಯದಲ್ಲಿ ಮುದ್ರಿಸಿ, ಧಾರವಾಡಲ್ಲಿ ೧೯೨೨ರಲ್ಲಿ ಪ್ರಕಟಿಸಿದರು. ೧೯೩೪ರಲ್ಲಿ ನಲವತ್ತನೆಯ ವಯಸ್ಸಿಗೆ ಚಿಕ್ಕ ವಯಸ್ಸಿನ ಹೆಂಡತಿ, ಮಕ್ಕಳನ್ನು ಅಗಲಿ ವಿಧಿವಶರಾದರು.

ಅಪಾರ ದೈವಭಕ್ತರಾಗಿದ್ದ ನಾರಣಪ್ಪನವರು 'ಮೃಕಂಡು' ಅಂಕಿತದಲ್ಲಿ ವಚನಗಳನ್ನು ಕಂದಪದ್ಯಗಳನ್ನು ಕೀರ್ತನ ಪದ್ಯಗಳನ್ನು ಬರೆದಿದ್ದಾರೆ. ಮುಂಬಯಿಯಿಂದ ಹೆಂಡತಿ ಅನಾರೋಗ್ಯ ನಿಮಿತ್ತ ನೋಡಲು ಬಂದವರು ಮತ್ತೆ ಅಲ್ಲಿಗೆ ಹಿಂದಿರುಗದ ಕಾರಣ ಅವರ ವಸ್ತುಗಳು, ಪುಸ್ತಕಗಳು, ಎಲ್ಲವೂ ಅಲ್ಲಿಯೇ ಉಳಿದವು. ಹೀಗಾಗಿ ಅವರ ವಚನ ಸಂಗ್ರಹ ಕೃತಿಗಳು, ಬರೆವಣಿಗೆಗಳು ಲಭ್ಯವಿಲ್ಲವಾಗಿವೆ. ಮುಂಬಯಿ ಯಿಂದ ಬಂದ ಮೇಲೆ ಅವರು ಹುಬ್ಬಳ್ಳಿಯಲ್ಲಿ ನೆಲೆಸಿ, ಎರಡನೆಯ ಕೃತಿ 'ಜ್ಞಾನಪದ್ಯಮಾಲೆ' ಬರೆದು ಪ್ರಕಟಿಸಿದರು. ದಾನಧರ್ಮಗಳಲ್ಲಿ ಆಸಕ್ತರಾಗಿದ್ದ ಅವರು ಬಡಬಗ್ಗರಿಗೆ ಧನ ಧಾನ್ಯಗಳನ್ನು ಹಂಚುತ್ತಿದ್ದರು. ಅವರು ಧೈರ್ಯಶಾಲಿಗಳೂ ಆಗಿದ್ದು ವಾಹನ ಸೌಕರ್ಯವಿಲ್ಲದ ಆ ಕಾಲದಲ್ಲಿ ಚಕ್ಕಡಿಯಲ್ಲಿ ಏಳೆಂಟು ಜನ ಗೋಕರ್ಣದಿಂದ ಹುಬ್ಬಳ್ಳಿಗೆ ಬರುವಾಗ ಕಳ್ಳರು ಎರಗಿದಾಗ, ಅವರೊಬ್ಬರೇ ಹೋರಾಡಿ ಕಳ್ಳರನ್ನು ಹೊಡೆದು ಓಡಿಸಿದರಂತೆ. ಅಂದಿನಿಂದ ಗಾಂವಕರ ಅವರು 'ನಾಡವರ ಹುಲಿ' ಎಂದು ಖ್ಯಾತರಾದರು.

ಬ್ರಿಟೀಷರ ವಿರುದ್ಧ ಪ್ರತಿಭಟಿಸಿದ್ದ ಈ ದೇಶಭಕ್ತರು ಮಕ್ಕಳನ್ನು ಸರ್ಕಾರಿ ಶಾಲೆಗೆ ಸೇರಿಸದೆ ರಾಷ್ಟ್ರೀಯ ಶಾಲೆಗೆ ಸೇರಿಸಿದ್ದರು. 'ಒಂದೆ ಮಾತೃವಿನೊಡಲಿನೊಳ್ ಬಂದವ ರೆಂದರಿದು ಹಿಂದು ಬಾಂಧವರೆಲ್ಲರ ಮುಂದೆ ಸ್ವದೇಶೋದ್ಧಾರವ ಬಂಧುರತರ ಭಾವ ಬಂದು ಗೆಯ್ವುದನುದಿನಂ' 'ಜಾತಿಯೆಂಬ ತೊಡಕು ಬಿಡಿಸಿ, ನೀತಿಗುಣವ ಮೂರ್ತಿಗೊಳಿಸಿ ಭ್ರಾತೃಭಾವದಿಂದ ನಡೆವ ನಡೆಯಗಲಿಸುವ' ಮತ್ತು 'ಸರ್ವಜನ ಸಮಾಜಸೇವೆಗೆಯ್ಯ ಮನುಜನವನೆ ದೇವ ಸಮನು' ಎಂಬ ನುಡಿಗಳಲ್ಲಿ ಪ್ರಗತಿಪರ ಮನೋಭಾವ ವ್ಯಕ್ತವಾಗುತ್ತದೆ. ತಮ್ಮ ಪರಿಚಯವನ್ನು ಅಭಿಮಾನದಿಂದ ಹೀಗೆ ಹೇಳಿದ್ದಾರೆ. ಸಾಹಿತ್ಯಾಭಿಮಾನ, ಆದರ್ಶ ವ್ಯಕ್ತಿತ್ವದ ಸಂಗಮವಾಗಿದ್ದ ಗಾಂವಕರ್ ಕವಿ ಹೃದಯ ಇಲ್ಲಿ ವ್ಯಕ್ತಗೊಂಡಿದೆ.

*ಕವಿರಾಜ ರಾಜ ಮಾನಿತ ।*
*ಸವಿಮಳನಾರ್ಯೌಷಧಾಲಯಕ್ಕಧಿರಾಜಂ ॥*
*ಭುವಿಯೊಳ್ ಮೃಕಂಡು ನಾಮಕ*
*ಸುವಿನೀತಂ ವಿಭುಧಮಾನ್ಯನನಿತರ ಸಾಮ್ಯಂ ॥*

ಇವರ ಪದ್ಯಸಂಕಲನದಲ್ಲಿ 'ಐಕ್ಯ ಮತ್ತು ವಿದ್ಯಾ', 'ಧರ್ಮಬೋಧ', 'ಬ್ರಹ್ಮಚರ್ಯಪಾಲನ' 'ಪರೋಪಕಾರ', 'ಸತ್ಯ-ಸತ್ಸಂಗ-ಭಾಷಾಭಿಮಾನ', 'ಜ್ಞಾನಬೋಧ' 'ನೀತಿಬೋಧಕ' 'ಜೀವಕಾರುಣ್ಯ', 'ಸತ್ಯಧರ್ಮ', 'ಸತ್ಯಮಾರ್ಗ ಬೋಧ' 'ಸತ್ಯನೀತಿಕ್ರಿಯಾಬೋಧ' – ಮೊದಲಾದ ಶೀರ್ಷಿಕೆಗಳ ಪದ್ಯಗಳಿದ್ದು ಯುವ ಜನಾಂಗ ವನ್ನು ಸನ್ಮಾರ್ಗದಲ್ಲಿ ನಡೆದು ಸ್ವಹಿತ-ಪರಹಿತಗಳನ್ನು ಸಾಧಿಸಬೇಕೆಂದು ಕರೆಯುತ್ತಿದ್ದಾರೆ.

ಆಧುನಿಕ ವಚನಕಾರರಾಗಿರುವ ಅವರ ಎಲ್ಲ ವಚನಗಳು ದೊರಕದಿದ್ದರೂ ದೊರೆತ ಒಂದೇ ಒಂದು ವಚನದ ಧಾಟಿ ವಿನೂತನವಾಗಿದೆ.

*ಶಿಕ್ಷಣಂ ಮಾನವರಿಗೊಂದು ದಿವ್ಯಶಕ್ತಿ*
*ಇದರೊಳ್ ಇಡಬೇಕು ಶ್ರದ್ಧೆ ಭಕ್ತಿ*
*ವಿದ್ಯಾ ವಿನಯಶೀಲಂ ಇರ್ಪ ವ್ಯಕ್ತಿ*
*ಸದ್ಭಾಗ್ಯವಂತಂ ಅವಂ ಮಹಾವ್ಯಕ್ತಿ*
*ಮೃಕಂಡು ಸುವಚನವಿದು ಶ್ರೀಗುರುವರಹರಾ*

ಆದರ್ಶ ಶಿಕ್ಷಿತ ವ್ಯಕ್ತಿಯ ಗುಣಶೀಲಗಳನ್ನು ಬಣ್ಣಿಸುವ ಈ ವಚನ ಮೌಲಿಕವಾಗಿದೆ. ○

**ಅಭಿನಂದನೆ**



**ಶ್ರೀ ಎಂ.ಎನ್. ಯೋಗರಾಜ್**, ವೃತ್ತಿ ಶಿಕ್ಷಕರು, ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಶುಕ್ರವಾರ ಸಂತೆ, ಸಕಲೇಶಪುರ ತಾ||, ಹಾಸನ ಜಿಲ್ಲೆ, ಇವರಿಗೆ ಬೆಂಗಳೂರಿನ ವಿಶ್ವ ವೀರಶೈವ ಸಂಸ್ಕೃತಿ ಪ್ರತಿಷ್ಠಾನ(ರಿ.) ರವರು ಜಗಜ್ಯೋತಿ ಶ್ರೀ ಬಸವೇಶ್ವರ ಸದ್ಭಾವನಾ ಪ್ರಸಸ್ತಿ ನೀಡಿ ಗೌರವಿಸಿದ್ದಾರೆ. ಸದರಿಯವರಿಗೆ ವಿವಿಧ ಸಂಘ ಸಂಸ್ಥೆಗಳಿಂದ ಇನ್ನೂ ಹಲವಾರು ಪ್ರಶಸ್ತಿಗಳು ಲಭಿಸಿವೆ. ಇವರನ್ನು 'ಸಿದ್ಧಗಂಗಾ' ಅಭಿನಂದಿಸುತ್ತದೆ.





# ಜಾಹಿರಾತಿನ ಮಾಯಾಜಾಲ

–ಈರಯ್ಯ ಕಿಲ್ಲೇದಾರ 'ಈನಿಂಕಿ', ಕವಿತಾ ಪ್ರಕಾಶನ ಗುಡಿಕಟ್ಟಿ, ಅಂಚೆ, ಕ್ರ. 591 104, ಬೆಳಗಾವಿ ಜಿಲ್ಲೆ.

ಹಿಂದೆ ವ್ಯಾಪಾರಕ್ಕೆಂದು ಬಂದವರು, ವಸಾಹತು ಸ್ಥಾಪಿಸಿ, ದೇಶದ ಸ್ವಾತಂತ್ರ್ಯವನ್ನೇ ಕಸಿದುಕೊಂಡಿದ್ದು ಇತಿಹಾಸವಾಗಿದೆ. ಈಗ ವಿಶ್ವವ್ಯಾಪಾರ ಒಪ್ಪಂದದಿಂದಾಗಿ ಸ್ವದೇಶಿ, ಸ್ವಾವಲಂಭನೆ ಬದುಕನ್ನು ಪರದೇಶಿ ಮತ್ತು ಪರಾವಲಂಬಿಯಾಗಿ ಮಾಡಲಾಗುತ್ತಿದೆ. ಅದ್ಯಾವುದೋ ದೇಶದ ವಸ್ತು ಈ ದೇಶದ ಮೂಲೆಯ ಹಳ್ಳಿಯಲ್ಲೂ ಪರಿಚಿತವಾಗುತ್ತಿದೆ. ಅದೇ ಹಳ್ಳಿಯ ಪರಂಪರಾಗತವಾಗಿ ಬಳಕೆಯಲ್ಲಿದ್ದ ವಸ್ತುಗಳು ಕಾಲಕಸವಾಗುತ್ತಿವೆ. ಇದೊಂದು ರೀತಿಯಾದರೆ, ಇನ್ನೊಂದು ರೀತಿಯಲ್ಲಿ ಈ ದೇಶದ ಕಚ್ಚಾ ವಸ್ತುಗಳೇ ವಿದೇಶಿ ಕಂಪನಿಗಳ ಆಕರ್ಷಕ ಪಾಕೆಟಿನಲ್ಲಿ ಜಾಹೀರಾತಿನ ಮೂಲಕ ನಮ್ಮ ದೇವರ ಜಗಲಿಯ ಮೇಲೆ ಪೂಜೆಗೊಳ್ಳುತ್ತಿದೆ. ಕದ್ದು ಮುಚ್ಚಿ ಯಾವುದೂ ಇಲ್ಲ. ಎಲ್ಲವೂ ಜಗಜ್ಜಾಹೀರ! 'ಅನೀತಿಯನ್ನೇ ನೀತಿ' ಎಂದೂ, 'ವಿಷವನ್ನು ಅಮೃತ' ಎಂದೂ, 'ಕಸವನ್ನೇ ಬಂಗಾರ'ಎಂದೂ ಸಾರಿ ಸಾರಿ ಹೇಳುತ್ತಾ, ಕೊಳ್ಳುವವನನ್ನು ಆಕರ್ಷಿಸುವಲ್ಲಿ ಜಾಹೀರಾತಿನ ಪಾತ್ರ ಬಲು ದೊಡ್ಡದಾಗಿದೆ.

ಜಾಹಿರಾತಿನ ಮಾರುಕಟ್ಟೆ ಮೌಲ್ಯ ಸುಮಾರು 900 ಕೋಟಿ ರೂಪಾಯಿಗಳಷ್ಟಾಗಿದೆ. ಪ್ರತಿವರ್ಷ 200 ಕೋಟಿಯಷ್ಟು ಹಣ ಜಾಹಿರಾತಿಗೆ ವಿನಿಯೋಗವಾಗುತ್ತಿದೆ. ಶೇ.80 ರಷ್ಟು ಲಾಭ ಜಾಹೀರಾತಿನಿಂದ ಆಗುತ್ತಿದೆ ಎಂಬುದು ಒಂದು ಅಂದಾಜು. ಜಾಹೀರಾತಿನಲ್ಲಿ ಕುಣಿಯದ ವಸ್ತುಗಳೇ ಇಲ್ಲ. ಹಾದಿಯಲ್ಲಿ ನಿಂತ ಹೆಂಗಸು ಹಾದು ಹೋಗುವವನ ಮನಸ್ಸನ್ನು ತನ್ನೆಡೆ ಸೆಳೆಯುತ್ತಾಳೆ. ಅವಳ ಒಂದು ನಗೆ ಇವನ ಎದೆಯಲ್ಲಿ ನೂರು ನಗಾರಿ ಬಾರಿಸುತ್ತದೆ. ಜಾಹಿರಾತಿಗೆಂದೇ ದೂರದರ್ಶನವೆಂಬ ಮಾಯಾಜಾಲ ಎಲ್ಲೆಡೆ ಬಲೆ ಬೀಸಿದೆ. ಜನಮರುಳು ಮಾಡುವ ಪ್ರಭಾವಶಾಲಿ ಮಾಧ್ಯಮ ಇದಾಗಿದೆ. ಮನುಷ್ಯನ ಆಶೆಗಳಿಗೆ, ಕನಸು, ಕಲ್ಪನೆಗಳಿಗೆ ಬಣ್ಣ ಕೊಡುವುದು ಜಾಹೀರಾತಿನ ಕೆಲಸವಾಗಿದೆ. ಜಾಹೀರಾತುಗಳು ಅಸಂಬದ್ಧವೂ ಆಗಿರುತ್ತದೆ. ಹೋಲಿಕೆಗೂ, ನಂಬಿಕೆಗೂ ಸಾಮಿಪ್ಯವಂತೂ ಇರಲಾರದು. ಎಲ್ಲಿಯ ವೇಶ್ಯೆ. ಎಲ್ಲಿಯ ಗರತಿ? ತಾಯಿಯ ಎದೆ ಹಾಲು ಕುಡಿಯದೆ ಬೆಳೆದವಳು ತಾಯಿಯ ಎದೆ ಹಾಲಿನ ಮಹತ್ವ ಹೇಳುತ್ತಾಳೆ. ಇದು ಯಾರಿಗಾಗಿಯೋ ಏನೋ ತಿಳಿಯದ ಒಗಟು, ಪಟ್ಟಣದ ಹೆಂಸಸರೋ ತಮ್ಮ ಸೌಂದರ್ಯ ಕೆಡುವುದೆಂದು ಮೊಲೆ ಹಾಲು ಕುಡಿಸಲಾರರು. ಹಳ್ಳಿಯ ಹೆಂಗಸರಂತೂ ಎದೆ ಹಾಲಿನ ಬಗ್ಗೆ ತಿಳಿದವರೇ ಆಗಿದ್ದಾರೆ.

ಜಾಹಿರಾತುಗಳ ಪರಿ ವಿಪರೀತ. ಅವು ನಗೆಗೇಡೂ ಆಗಿವೆ. ಸ್ವದೇಶಿ ವಿರೋಧಿಯೂ ಆಗಿವೆ. ಜಾಹೀರಾತಿನಿಂದ ನಮ್ಮ ಜನತೆಗೆ, ಜನತೆಯ ಆರೋಗ್ಯಕ್ಕೆ ಶೇ.1ರಷ್ಟೂ ಪ್ರಯೋಜನವಾಗದು. ಈ ದಿನಗಳಲ್ಲಿ ದೇಶಿ-ಸ್ವದೇಶಿಗಳ ನಡುವಿನ ವ್ಯತ್ಯಾಸದ ಗೆರೆಯೇ ಅಳಿಸಿಹೋಗಿದೆ. ಇದು ಜಾಹಿರಾತಿನ ಪ್ರಭಾವದಿಂದ, ಜನರ ಮನೋಭಾವನೆ, ಆಯ್ಕೆಯ ಆದ್ಯತೆಯೂ ಬದಲಾಗಗಲು ಜಾಹೀರಾತು ಕಾರಣವಾಗಿದೆ. ಒಂದು ಕಡೆ ಎಲೆಯಡಿಕೆ, ಸುಣ್ಣ, ಯಾಲಕ್ಕಿ, ಕಾಚು, ಜಡೇಸೋಪು ಮತ್ತು ಇನ್ನೊಂದು ಕಡೆಗೆ ಸುಗಂಧ ಭರಿತ ಹೊಲಸು ಅಡಿಕೆ ಚೀಟು, ಗುಟಕಾದ ಚೀಟುಗಳ ನ್ನಿಟ್ಟರೆ, ಗುಟಕಾಚೀಟಿನ ಕಡೆಗೆ ಜನ ಆಕರ್ಷಿತರಾಗುತ್ತಾರೆ. ಹಾಲು ಒಂದು ಕಡೆ ಇನ್ನೊಂದು ಕಡೆ ಚಹಾ ಇಟ್ಟರೆ ಚಹದ ಕಡೆ ಜನ ವಾಲುತ್ತಾರೆ. ಒಂದು ಲಿಂಬೆ ಹಣ್ಣಿನ ಪಾನಕ(ಶರಬತ್ತು) ಇಟ್ಟು ಇನ್ನೊಂದು ಕಡೆ ತಂಪು ಪಾನೀಯ ಇಟ್ಟರೆ ತಂಪು ಪಾನೀಯ ಆಯ್ಕೆಯಲ್ಲಿ ಪ್ರಾಧಾನ್ಯತೆ ಪಡೆಯುತ್ತದೆ. ಯಾಕೆ ನಮ್ಮ ಜನ ನಮ್ಮದನ್ನು ಮರೆಯುತ್ತಿದ್ದಾರೆ. ರುಚಿ-ಸತ್ವಗಳನ್ನು ತಿರಸ್ಕರಿಸಿ ಆರೋಗ್ಯ ಕೆಡಿಸಿಕೊಳ್ಳಲು ಪತಂಗ ದೀಪದ ಕಡೆ ಆಕರ್ಷಿತವಾದಂತೆ ಬಲಿಯಾಗುತ್ತಿದ್ದಾರೆ ? ಇದು ಯಕ್ಷ ಪ್ರಶ್ನೆಯಾಗಿದೆ.

ಜಾಹೀರಾತುಗಳಲ್ಲಿ ಜಳ್ಳು ಕಾಳುಗಳೇ ಹೆಚ್ಚು. ಗಟ್ಟಿ ಕಾಳಿಗೆ ಅಲ್ಲಿ ಸ್ಥಳವಿಲ್ಲ. ದೇಶದ ಭಾವೀ ಪ್ರಜೆಗಳ ಮನಸ್ಸನ್ನು ಸೆಳೆದು, ಅವರ ತನು ಮನ ಧನಗಳನ್ನು ಹಾಳು ಮಾಡಿ ದೇಶದ ಭವಿಷ್ಯವನ್ನೇ ಕರಾಳಗೊಳಿಸುವ ಪ್ರಯತ್ನ ಜಾಹೀರಾತಿನದಾಗಿದೆ. ಹೊಡಿ, ಬಡಿ, ಕಡಿ ಎಂದು ಹಿಂಸೆ, ಕಾಮ ಪ್ರಚೋದನೆಯಂತಹ ಒಣ ಪ್ರತಿಷ್ಠೆಯನ್ನೇ ದೂರದರ್ಶನ ಪ್ರಚಾರ ಮಾಡಿ, ಯುವಕರನ್ನು ತರಬೇತು ಗೊಳಿಸುತ್ತದೆ. ನಾವು ಪಾಲಕರು ನಮ್ಮ ಮಕ್ಕಳಿಗೆ ಯಾವುದು ಬೇಕಾಗಿತ್ತು ಎನ್ನುತ್ತೇವೋ, ಯಾವುದನ್ನು ನೋಡಬಾರದೆಂದು ಬಯಸುತ್ತೇವೋ ಅದನ್ನೇ ಹಾಡಿ ಹಾಡಿ

ಹರಸುವುದು ದೃಶ್ಯಮಾಧ್ಯಮಗಳಲ್ಲಿ ನಡೆಯುತ್ತದೆ. ಉದಾಹರಣೆಗೆ ಬ್ಯಾಟ್ ಹಿಡಿದು ಚೆಂಡನ್ನು ಹೊಡೆಯುವುದನ್ನು ಹಲ್ಲು ಉಜ್ಜಲು ಇದನ್ನೇ ಬಳಸಬೇಕೆಂದು ಯಾವ ಪಾಲಕರೂ ಕಲಿಸಿಕೊಡಬೇಕಾಗಿಲ್ಲ. 'ಮೂರು ವರುಷದ ಬುದ್ಧಿ ನೂರು ವರ್ಷದ ತನಕ' ಎಂಬ ಮಾತಿನಂತೆ ನಮ್ಮ ಬಾಲಕರೇ ನಾಯಕರಾಗುವ ಭವಿಷ್ಯ ಊಹಿಸಲೂ ಆಗದಷ್ಟು ಕೆಟ್ಟು ಹೋಗುತ್ತಿದೆ. ಶಿಕ್ಷಣ ನೀತಿಯಲ್ಲೂ ನಮ್ಮತನ ಕಲಿಸುವ ಪ್ರಯತ್ನಗಳು ವಿರಳ. ಶಾಲೆ ಕಲಿತ ವಿದ್ಯಾರ್ಥಿ(ಇಂದಿನ ವಿದ್ಯಾರ್ಥಿ) ಹಾಲು ಎಲ್ಲಿಂದ ಬರುತ್ತದೆ ಎಂದರೆ ಥಟ್ಟನೆ ಹೇಳಬಲ್ಲ 'ಡೇರಿಯಿಂದ' ಎಂದು.

ಜಾಹೀರಾತುಗಳಿಗೆ ರೀತಿ-ನೀತಿ ರಿವಾಜು ಒಂದೂ ಇಲ್ಲ. ಜಾಹೀರಾತು ನೀತಿಯೂ ಇಲ್ಲ. ಹೊತ್ತು ಗೊತ್ತುಗಳಿಲ್ಲದೆ ಹೊತ್ತಿನ್ಯಾಗ ಏನೆಲ್ಲಾ ತೋರಿಸುತ್ತವೆ. ಅನಾರೋಗ್ಯಕರ, ಅಸಹ್ಯಕರ, ಅಶ್ಲೀಲ, ಹಿಂಸೆಗಳೆಲ್ಲ ಜಾಹೀರಾತಿನಲ್ಲಿ ತುಂಬಿರುತ್ತವೆ. ಒಳ್ಳೆ ಧಾರವಾಹಿ ನೋಡುತ್ತಿರುವ ಸಂಧಿಗ್ಧ ಸನ್ನಿವೇಶದಲ್ಲಿ ಏನಾಗುವುದೋ ಎಂಬ ಕುತೂಹಲದಲ್ಲಿ ಪ್ರೇಕ್ಷಕ ಇರುವಾಗ ಸಿಹಿ ಪಾಯಸ ಸವಿಯುವ ಸಂದರ್ಭದಲ್ಲಿ ಕಹಿ ಬೇವಿನ ಕಾಯಿ ಕಡಿದಂತೆ ಜಾಹೀರಾತು ಬಂದು ಬಿಡುತ್ತದೆ. ಪುರಾತನ ಕಾಲದಿಂದಲೂ ಸಮುದ್ರದ ನೈಸರ್ಗಿಕ ಉಪ್ಪು ತಿಂದು ಆರೋಗ್ಯ ದಿಂದಿರುವವರಿಗೆ ಅಯೋಡಿನ್ ಯುಕ್ತ ಉಪ್ಪನ್ನು ಬಳಸಲು ಹೇಳುವ ಜಾಹೀರಾತು ಆಗಲಿ, ಬಹುಜನರೊಡನೆ ಲೈಂಗಿಕ ಸಂಬಂಧವಿಟ್ಟುಕೊಂಡವರಿಗೆ ಏಡ್ಸ್ ರೋಗದ ಭೀತಿ ಹುಟ್ಟಿಸುವುದಾಗಲಿ ಅತಿಶಯೋಕ್ತಿ ಎನಿಸುತ್ತದೆ. ಬಹು ಜನರೊಡನೆ ಲೈಂಗಿಕ ಸಂಬಂಧ ಇರಿಸಿಕೊಂಡವರಿಗೆ ಲೈಂಗಿಕ ರೋಗ ಬರುವುದೆಂಬುದು ಎಲ್ಲರಿಗೂ ಗೊತ್ತು. ಚಿಕೂನ್ ಗುನ್ಯಾ ರೋಗಕ್ಕಾಗಲಿ, ಡೇಂಗೀ ಜ್ವರದ ಬಗ್ಗೆಯಾಗಲಿ ಸೂಕ್ತ ಔಷಧಿ ಕೊಡಲಾಗದೆ ಒಣ ಉಪದೇಶವನ್ನು ಜಾಹೀರಾತಿನ ಮೂಲಕ ಹೇಳುವುದಾಗಲಿ ಅಪಹಾಸ್ಯದ ಸಂಗತಿಯಾಗಿದೆ.

ಒಬ್ಬ ದನಕಾಯುವ ಹುಡುಗನೂ ಏಳುವುದರೊಳಗಾಗಿ ಟೂತ್‌ಬ್ರಶ್‌ನಿಂದ ಹಲ್ಲುಜ್ಜುವದು ಸಾಮಾನ್ಯ ದೃಶ್ಯವಾಗಿದೆ. ದನಕಾಯುವರಾಗಲಿ, ಕುರಿಕಾಯುವವರಾಗಲಿ ಟೂತ್‌ಬ್ರಶ್ ಉಪಯೋಗಿ ಸಬಾರದೆಂಬುದು ನನ್ನ ಅಭಿಪ್ರಾಯವಲ್ಲ. ನನ್ನ ಆಕ್ಷೇಪ ಇರುವುದು ಹೊಲಗಳಲ್ಲಿ, ಬೇಲಿಗಳಲ್ಲಿ, ಗೋಮಾಳಗಳಲ್ಲಿ ಹಲ್ಲುಜ್ಜಲು ಸಹಜವಾಗಿ ಬೇವಿನಕಡ್ಡಿ ಉತ್ತರಾಣಿ ಬೇರು, ಕರಿಬೂದಿ(ಕರುಳಿನ ಬೂದು)ಗಳು ಕೈಯಳತೆಯಲ್ಲೇ ದೊರಕುತ್ತಿವೆ. ಹತ್ತು ಪೈಸೆಯ ಖರ್ಚಿಲ್ಲದೆ ಸಿಗುವ ಸಲಕರಣೆಗಳನ್ನು ತಿರಸ್ಕರಿಸಿ, ಅವುಗಳನ್ನು ತೆಗಳುತ್ತ 'ಹಿತ್ತಲ ಗಿಡ ಮದ್ದಲ್ಲ' ಎಂಬ ಮಾತಿನಂತೆ ವರ್ತಿಸುವುದು ಸರಿಯಲ್ಲ. ಉತ್ತರಾಣಿ ಬೇರಿನಿಂದ ಹಲ್ಲುಜ್ಜಿದರೆ ಹುಳುಕು ಹಲ್ಲು ಗಟ್ಟಿಯಾಗುವುದು. ಹಲ್ಲು ನೋವಿನ ಬಾಧೆಯಂತೂ ಸಮೀಪಕ್ಕೆ ಸುಳಿಯಲಾರದು. ಜನ ಯಾಕೋ ಏನೋ ಮರುಳಾಗುತ್ತಾರೆ.

ಜನತೆಯ ಕೊಳ್ಳುವ ಶಕ್ತಿ ಹೆಚ್ಚಾಗಿದೆ. ಜಾಹೀರಾತಿನಿಂದ ಹೆಚ್ಚು ಹೆಚ್ಚು ವಸ್ತುಗಳನ್ನು ಬಯಸುತ್ತೇವೆ. ಎಷ್ಟು ಬೇಗ ಜನ ತಮ್ಮದನ್ನು, ತಮ್ಮತನವನ್ನು, ಕೈಯಳತೆಯಲ್ಲಿರುವ ಉಚಿತವಾಗಿ ದೊರಕುವ ವಸ್ತುಗಳನ್ನು ಮರೆತು ಬಿಡುತ್ತಾರೆ ನೋಡಿರಿ, ಎಷ್ಟು ಬೇಗ ಹಣಕೊಟ್ಟು ಕೊಳ್ಳಲು ಮುಂದಾಗುತ್ತಾರೆ ಎಂಬುದು ಆಶ್ಚರ್ಯದ ಸಂಗತಿಯಾಗಿದೆ. ಬಹಳ ಜನ ಸ್ವದೇಶಿ ಬಗ್ಗೆ ಹೇಳುವವರೇ ಬೆಳಗಾಗುತ್ತಲೆ ತಮ್ಮ ದಿನಚರಿಯನ್ನು ವಿದೇಶಿ ವಸ್ತುವಿನ ಬಳಕೆಯಿಂದಲೇ ಆರಂಭಿಸುತ್ತಾರಲ್ಲವೆ? ಬೆಂಗಳೂರಿನಂತಹ ಊರಲ್ಲಿ ಬೇವಿನ ಗಿಡವಾಗಲಿ ಉತ್ತರಾಣಿ ಬೇರಾಗಲಿ ಸಿಗಲಿಕ್ಕಿಲ್ಲ. ಆದರೆ ಹಲ್ಲುಜ್ಜಲು ಎಷ್ಟೋ ಹಲ್ಲುಪುಡಿಯ ಡಬ್ಬಿಗಳನ್ನು ಹಳ್ಳಿಗರು ತಯಾರಿಸಿ ಪಟ್ಟಣಗಳಿಗೆ ಒದಗಿಸುತ್ತಲೇ ಇದ್ದಾರೆ. ಜಾಹೀರಾತುಗಳು ಬಯಕೆಗಳನ್ನು ಹೆಚ್ಚಿಸುತ್ತವೆ. ಕನಸುಗಳನ್ನು ಮಾರುತ್ತವೆ. ಶರೀರಕ್ಕೆ ಆರೋಗ್ಯಕ್ಕೆ ಎಷ್ಟು ಉಪಯುಕ್ತ ಹಾಗೂ ಆರೋಗ್ಯಕರ ಎಂಬುದು ಅಪ್ರಸ್ತುತ ಎನಿಸುತ್ತದೆ. ಕೆಲವು ಜಾಹೀರಾತುಗಳು ಹಾಡಿದ್ದನ್ನೇ ಹಾಡುತ್ತವೆ. 'ಹಾಡಿದ್ದು ಹಾಕುವ ಕಿಸುಬಾಯಿ ದಾಸಯ್ಯ' ಎಂಬ ಮಾತಿನಂತೆ ಪೋಲಿಯೋ ಹನಿ ಹಾಕಿಸುವ ಬಗ್ಗೆ ಹೇಳುವ ಮಾತು ಹಿಂಸಾರೂಪದ್ದಾಗಿದೆ. ಸಾಬೂನುಗಳ ಜಾಹಿರಾತಿನಲ್ಲಿ ಸುಂದರಿಯೊಬ್ಬಳ ಅಂಗ ಉಪಾಂಗಗಳನ್ನು ತೋರಿಸುತ್ತ ಬಟ್ಟೆ ಕಳಚುವ, ಸಾಬೂನಿನ ನೊರೆಯಿಂದ ಮುಚ್ಚುವುದಾಗಲಿ ಎಂಥಹ ಅಸಹ್ಯಕರ ಎಂಬುದು ಗಮನಾರ್ಹ ಸಂಗತಿಯಾಗುವುದೇ ಇಲ್ಲ. ಹಾಗೆ ನೋಡಿದರೆ ಸಾಬೂನು ಹಚ್ಚುವುದು ಚರ್ಮಕ್ಕೆ ಹಿತಕರವೇ ಅಲ್ಲ. ಯಾವುದು ಆರೋಗ್ಯಕರವಲ್ಲ, ಯಾವುದು ಆರೋಗ್ಯಕರ ಎಂದು ನಮ್ಮ ವೈದ್ಯರು, ತಜ್ಞರು ತಿಳಿಸಿಕೊಡಲು ಅವರ ಬಾಯಿಗೆ ಹೊಲಿಗೆ ಹಾಕಲಾಗಿದೆ.





ಹೆಣ್ಣು ಜಾಹೀರಾತಿನ ವಸ್ತು ಆಗಿದೆ. ವಿಶ್ವಸುಂದರಿಯರೆಲ್ಲ ಭಾರತದವರೇ ಆಗುತ್ತಾರೆ. ಇದು ಜಾಹೀರಾತಿನ ತಂತ್ರ. ಬೆಕ್ಕಿನ ನಡಿಗೆ ನಡೆಯುತ್ತ ಕಂಪನಿಯ ವಸ್ತುಗಳು ಮಾರಾಟವಾಗಲು ರೂಪದರ್ಶಿಯಾಗುತ್ತಾಳೆ. ವಿಶ್ವಸುಂದರಿಯರು, ಸಿನಿಮಾ ನಟ-ನಟಿಯರು ಕ್ರಿಕೆಟ್ ತಾರೆಯರು ಜಾಹೀರಾತಿನ ರೂಪದರ್ಶಿಗಳಾಗಿ ಹಣದ ರಾಶಿ ಮಾಡಿ ದೇಶದ ಜನರನ್ನು ಮರುಳು ಮಾಡುತ್ತಾರೆ. ಇನ್ನೊಂದು ಕಡೆ ಸರಕಾರಕ್ಕೆ ಕೊಡಬೇಕಾದ ಕರವನ್ನು ಕೊಡದೆ ಸರಕಾರಕ್ಕೆ ವಂಚನೆ ಮಾಡುತ್ತಾರೆ. ಹೀಗೆ ಒಂದು ರೀತಿಯಲ್ಲಿ ಇವರೆಲ್ಲ ಸ್ವದೇಶಿ ವಿರೋಧಿಗಳೆನ್ನಲು ಅಡ್ಡಿಯಿಲ್ಲ. ಹಣ ಪಡೆದ ವಿದೇಶಿ ವಸ್ತುಗಳ ರೂಪದರ್ಶಿಗಳಾಗಿ ಜಾಹೀರಾತು ಮಾಡಿ, ಸ್ವದೇಶಿ ವಸ್ತುಗಳನ್ನು, ಹಣ ಪಡೆಯದೇ ಜಾಹೀರಾತು ಮಾಡಿ ಈ ದೇಶದ ಋಣ ತೀರಿಸಲು ಇವರಿಗೇನಾಗಿದೆ. ಸಾವಿರಾರು ಕೋಟಿ ಜಾಹೀರಾತಿನ ಮೂಲಕ ಗಳಿಸುವ ಮೂರ್ಖರ ಪೆಟ್ಟಿಗೆ ಸ್ವದೇಶಿ ವಸ್ತುಗಳ ಜಾಹೀರಾತಿಗೆ ಉಚಿತವಾಗಿ ಅವಕಾಶ ಮಾಡಿಕೊಟ್ಟರಾಗದೆ? ಕಾಮಸೂತ್ರದಿಂದ ಬೇಕಾದಷ್ಟು ಗಳಿಸಬಹುದಾಗಿದೆ. ಕಾಮಸೂತ್ರದ ಮಾತುಗಳನ್ನು ಮಾರಲೆಂದೇ ಕಂಪನಿಗಳಿವೆ. ಜಾಹೀರಾತಿನ ಮೂಲಕ ಬಲೆ ಬೀಸುತ್ತಲೇ ಇರುತ್ತಾರೆ.

ಒಳ್ಳೆಯದು ತೆವಳಿಕೊಂಡು ಬಂದರೆ, ಕೆಟ್ಟದು ಒಮ್ಮೆಲೆ ಹಾರಿ ಬರುತ್ತದೆ. ಅದರಂತೆ ಜಾಹೀರಾತಿನ ಮೋಡಿ ಹಾರಿ ಬರುತ್ತದೆ. ಒಂದು ಸಂಸ್ಕೃತಿ ಉಳಿಯುವುದು ಬಹು ಸಂಖ್ಯಾತ ಜನರ ಉತ್ಪಾದನೆಗಳ ಬೇಡಿಕೆ ಹಾಗೂ ಮಾರಾಟದಿಂದ ಮತ್ತು ಬಳಕೆಯಿಂದ. ಜಾಹೀರಾತಿನ ಮೂಲಕ ತಮ್ಮದೆಲ್ಲ ಹಾರಿ ಸಮುದ್ರ ಸೇರುತ್ತಿದೆ. ಬಿರುಗಾಳಿಗೆ ಹಾರದಂತಹ ಗಟ್ಟಿತನ, ಆಕರ್ಷಣೆಗೆ ಜಾರದಂತಹ, ಕಾಲೂರಿ ನಡೆವ ಶಕ್ತಿ, ಸಾಮರ್ಥ್ಯ ನಾವು ಉಳಿಸಿಕೊಳ್ಳಬೇಕಿದೆ, ಬೆಳೆಸಿ ಕೊಳ್ಳಬೇಕಿದೆ ಮತ್ತು ಬಳಸಿಕೊಳ್ಳಬೇಕಿದೆ. ನರಿ ಬುದ್ಧಿ ಇದ್ದವರು ಕುರಿ ಬುದ್ಧಿ ಕಲಿಸುವುದು ಸರಿಯಲ್ಲ. ಸ್ವದೇಶದಲ್ಲಿ ನಾವೆಲ್ಲ ಪರದೇಶಿಗಳಾಗುವುದು ಸರಿ ಎನಿಸದು. ○



ಬೆಂಗಳೂರು ನಗರ, ಬಿ.ಟಿ.ಎಂ. ಲೇಔಟ್, 2ನೇ ಹಂತದಲ್ಲಿರುವ ಶರಣ ಬಳಗದವರು ಶ್ರೀಮಠಕ್ಕೆ ಶ್ರೀಮತಿ ಶಕುಂತಲಾ ಜಯದೇವ್ ಇವರ ನೇತೃತ್ವದಲ್ಲಿ ಭೇಟಿ ಇತ್ತು ಪೂಜ್ಯರ ಪಾದಪೂಜೆಯನ್ನು ನೆರವೇರಿಸಿ ಶ್ರೀಮಠದ ಮಹಾದಾಸೋಹ ನಿಧಿಗೆ ಒಂದು ಲಕ್ಷ ರೂಗಳನ್ನು ನೀಡಿದರು.

# ಬಸವಣ್ಣನವರ ಹಾಗೂ ಅಕ್ಕಮಹಾದೇವಿಯವರ ವಚನಗಳಲ್ಲಿ ವೈಜ್ಞಾನಿಕ ಅಂಶಗಳು

## ವಿಶ್ವದಲ್ಲಿಯ ಶಕ್ತಿ ಮೂಲದ ಪ್ರಸ್ತಾಪ

-ಡಾ॥ ವ್ಹಿ.ವ್ಹಿ. ಬಾಗಲಕೋಟಿ, ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ ಕಾಲೋನಿ, ಗೋಕಾಕ-೫೯೧೩೦೭.

**ಮ**ಹಾದೇವಿ ಅಕ್ಕನ ವಚನ<sup></sup>ವೊಂದರಲ್ಲಿ

*ಸುಟ್ಟು ಬೂದಿಯೊಳಗೊಂದು ಸುಡದ ಬೂದಿಯ ಕಂಡೆ*
*ಆ ಸುಡದ ಬೂದಿಯ ಬೆಟ್ಟವ ಮಾಡಿದಾತನ,*
*ಗುಟ್ಟನಾರು ಕಂಡುದಿಲ್ಲ.*
*ನಾನು ಆತನರಿದು ಶರಣೆಂದು ಬದುಕಿದೆ.*
*ಆ ಬೆಟ್ಟದ ಮೇಲೆ ಅನೇಕ ವಸ್ತುಗಳ ಕಂಡು*
*ಚರಿಸುತ್ತಿದ್ದೇನೆ ಚೆನ್ನಮಲ್ಲಿಕಾರ್ಜುನಾ.*

ಹಿಂದೆ ಅಭ್ಯಸಿಸಿದ ವಚನದಲ್ಲಿ ಅಕ್ಕಮಹಾದೇವಿಯವರು, ಲೋಕದ ಚೇಷ್ಟೆಗೆ, ಅಂದರೆ ಸಕಲ ಭೂಲೋಕದ ಜೀವಿಗಳ, ಜನನ ಜೀವನ ಸಾವು ಇತ್ಯಾದಿ ಚಟುವಟಿಕೆಗಳಿಗೆ, ರವಿಯಿಂದ ದೊರೆವ ಶಕ್ತಿಯೇ ಮೂಲವೆಂಬ ಸತ್ಯವನ್ನು ಹೇಳಿಯಾದ ಮೇಲೆ, ಸುಟ್ಟ ಬೂದಿಯೊಳಗೊಂದು ಸುಡದ ಬೂದಿಯ ಕಂಡೆ, ಎಂಬ ಹೇಳಿಕೆಯನ್ನು ಅವಲೋಕಿಸಿದರೆ, ಇಲ್ಲಿ ಉರವಲು ಸುಟ್ಟ ಮೇಲೆ ಉಳುಯುವ ಬೂದಿ ಹಾಗೂ ಸುಡದ ಬೂದಿ, ಅಂದರೆ ಸುಡುವುದಕ್ಕಿಂತ ಮೊದಲಿನ ಉರವಲು ಇಲ್ಲವೆ ಇಂಧನ, ಇವುಗಳ ಪ್ರಸ್ತಾಪವಿದೆ. ಸುಡದ ಬೂದಿಯ, ಅಂದರೆ ಇಂಧನದ ಹಾಗೂ ಇಂಧನದ ಬೆಟ್ಟವ ಮಾಡಿದಾತನ ಗುಟ್ಟನಾರು ಕಂಡಿದಿಲ್ಲ ಎಂದು ಹೇಳಿ ಆತನರಿದು ಶರಣೆಂದು ಬದುಕಿದೆ ಎಂದಾಗ, ಆತನು ದೇವನೆಂದು ಬೇರೆ ಹೇಳಬೇಕಾಗಿಲ್ಲ. ಆದುದರಿಂದ ಆ ಇಂಧನ ಮತ್ತು ಇಂಧನದ ಬೆಟ್ಟವು ವಿಶ್ವದಲ್ಲಿಯ ಉರವಲು(Cosmic fuel)ಗಳಿಗೆ ಸಂಬಂಧಿಸಿದ್ದೆಂದು ಧಾರಾಳವಾಗಿ ಹೇಳಬಹುದು.

ಆಕಾಶದಲ್ಲಿ ಗೋಚರಿಸುವ ಸೂರ್ಯ, ಚಂದ್ರ, ಸೂರ್ಯ ವ್ಯೂಹದ ಗ್ರಹಗಳು, ನಕ್ಷತ್ರಗಳು, ನಕ್ಷತ್ರ ಮಂಡಲ ಗಳು ಇತ್ಯಾದಿಗಳು ವಿಶ್ವ(ಬ್ರಹ್ಮಾಂಡ)ದ ಭಾಗಗಳಾಗಿವೆ. ಇವುಗಳನ್ನು ಸ್ವಯಂಪ್ರಕಾಶಿತ ಹಾಗೂ ಪರಪ್ರಕಾಶವು ಪ್ರತಿಫಲನಗೊಂಡು ಹೊಳೆಯುವ ಕಾಯಗಳೆಂದು ಎರಡು ಗುಂಪುಗಳನ್ನಾಗಿ ವಿಂಗಡಿಸಬಹುದು. ಗ್ರಹಗಳು, ಚಂದ್ರ ಹಾಗೂ ಚಂದ್ರನಂತಹ ಉಪಗ್ರಹಗಳು ಹಾಗೂ ನಿರ್ಮಿತ ಉಪಗ್ರಹಗಳು ಪ್ರಕಾಶವನ್ನು ಉತ್ಪಾದಿಸುವುದಿಲ್ಲ. ಕಾರಣ, ಸ್ವಯಂ ಪ್ರಕಾಶಿತವಲ್ಲ. ಅವು ತಮ್ಮ ವ್ಯೂಹದಲ್ಲಿಯ ನಕ್ಷತ್ರ ಇಲ್ಲವೆ ಬೇರೆ ನಕ್ಷತ್ರಗಳಿಂದ ವಿಕಿರಣಗೊಂಡು ಅವುಗಳ ಮೇಲೆ ಫಲಿತವಾದ ಪ್ರಕಾಷವು ಪ್ರತಿಫಲನಗೊಂಡ ಮೇಲೆ ಹೊಳೆಯುತ್ತವೆ.

ಆದರೆ, ನಕ್ಷತ್ರ ಮಂಡಲ ಇಲ್ಲವೆ ವ್ಯೂಹಗಳಲ್ಲಿಯ ಹಾಗೂ ಇತರ ನಕ್ಷತ್ರಗಳು ಮಾತ್ರ ಶಕ್ತಿಯನ್ನು ಉತ್ಪಾದಿಸಿ ವಿಕಿರಣಗೊಳಿಸಿ ಸ್ವಯಂಪ್ರಕಾಶಿತವಾಗಿರುತ್ತವೆ. ಇಂಥವುಗಳಲ್ಲಿ ಸೂರ್ಯನೂ ಒಂದು ನಕ್ಷತ್ರ, ಇವುಗಳಲ್ಲಿ ಅನಂತವೆಂದು ಕರೆಯಭುದಾದಷ್ಟು ಅತಿ ದೀರ್ಘ ಕಾಲದವರೆಗೆ ಅಗಾಧ ಪ್ರಮಾಣದಲ್ಲಿ ಶಕ್ತಿಯು ಉತ್ಪನ್ನವಾಗಿ ವಿಕಿರಣಗೊಳ್ಳಬೇಕಾದರೆ, ಅವುಗಳಲ್ಲಿ ಇರುವಂಥ ಉರುವಲು ಅಥವಾ ಇಂಧನ ಯಾವುದು? ಅಷ್ಟು ಅಪಾರ ಸಂಗ್ರಹ(ಬೆಟ್ಟ)ದ ಗುಟ್ಟು ಏನು? ಇವು ಅಕ್ಕಮಹಾದೇವಿಯವರು ಎತ್ತಿ ತೋರಿಸಿದಂತೆ ಅತಿ ಮಹತ್ವದ ಪ್ರಶ್ನೆಗಳು.

ಸಾಮಾನ್ಯವಾಗಿ ನಮಗೆ ಗೊತ್ತಿರುವ ಇಂಧನಗಳಾದ ಉರುವಲು ಕಟ್ಟಿಗೆ, ಸೀಮೆಎಣ್ಣೆ, ಪೆಟ್ರೋಲಿಯಮ್, ಕಲ್ಲಿದ್ದಲು, ಮಿಂಚು, ಇತ್ಯಾದಿಗಳಾವವೂ ನಮ್ಮ ಸೂರ್ಯ ಇಲ್ಲವೇ ಯಾವುದೇ ನಕ್ಷತ್ರದಲ್ಲಿದ್ದು ಉರಿದು ಪ್ರಕಾಶವನ್ನು ವಿಕಿರಣಗೊಳಿಸುತ್ತಿದ್ದರೆ, ಅಲ್ಲಿದ್ದ ಇಂಧನ ಸಂಗ್ರಹವೆಲ್ಲ ಕೆಲವೊಂದು ಸೀಮಿತ ಅವಧಿಯಲ್ಲಿ, ಶತಮಾನವಿರಲಿ ಅಥವಾ ಸಹಸ್ರ ಶತಮಾನವಿರಲಿ, ಅಷ್ಟರಲ್ಲಿ ವ್ಯಯಿಸಿ, ಶಕ್ತಿ ವಿಕಿರಣವು ನಿಂತು ಬಿಡುತ್ತಿತ್ತು. ನಮ್ಮ ಸೂರ್ಯನನ್ನೇ ತೆಗೆದುಕೊಂಡರೆ, ಅಂಥ ಸಂದರ್ಭದಲ್ಲಿ ವಿಕಿರಣವು ನಿಂತು ಭೂಮಿಯ ಉಷ್ಣತೆಯು ತಗ್ಗಿ ಹಿಮಮಯವಾದ ಕತ್ತಲಾಗುತ್ತಿತ್ತು. ಕಾರಣ ನಕ್ಷತ್ರಗಳಲ್ಲಿ ಅಥವಾ ನಮ್ಮ ಸೂರ್ಯನಲ್ಲಿ ಇರಬಹುದಾದ ವಿಶಿಷ್ಟ ಇಂಧನವಾವುದು? ಎಂಬುದನ್ನು ತಿಳಿದರೆ ಪವಾಡ ಸದೃಶ ಪ್ರಶ್ನೆಗಳಾದ ದೀರ್ಘಕಾಲ ಅಗಾಧ ಪ್ರಮಾಣದ ಶಕ್ತಿಯ ವಿಕಿರಣಗಳಿಗೆ ವಿವರಣೆ ಸಿಗಬಹುದು.

ಆಧುನಿಕ ಸಂಶೋಧನೆಗಳಿಂದ ವಿಜ್ಞಾನಿಗಳು ಕಂಡು ಹಿಡಿದಿದ್ದು ಹೀಗೆ- ನಾಲ್ಕು ಹೈಡ್ರೋಜನ್ ಪರಮಾಣುಗಳ ಬೀಜಾಳುಗಳು ಅಗಾಧ ಉಷ್ಣತೆಯಲ್ಲಿ ಬೀಜಾಣು ಸಮ್ಮಿಳನ ಕ್ರಿಯೆಯಿಂದ ಒಂದು ಹೀಲಿಯಮ್ ಬೀಜಾಣು ಉಂಟಾದಾಗ 0.71% ಪ್ರತಿಶತ ಪ್ರಮಾಣದಲ್ಲಿ ದ್ರವ್ಯರಾಶಿಯ ಹಾನಿ (ಕೊರತೆ) ಯುಂಟಾಗುತ್ತದೆ. ಕೊರತೆಯಾದ ದ್ರವ್ಯರಾಶಿಯು ಐನ್‌ಸ್ಟೈನ್‌ರ ಸಮೀಕರಣ $E=mc^2$ ಪ್ರಕಾರ ದೊಡ್ಡ ಪ್ರಮಾಣದ ಶಕ್ತಿಯಾಗಿ ಪರಿವರ್ತನೆಗೊಳ್ಳುತ್ತದೆ. ಇಲ್ಲಿ ಹೈಡ್ರೋಜನ್ ಅನಿಲಕ್ಕೆ ಸುಟ್ಟ ಬೂದಿ ಎನ್ನಬಹುದಲ್ಲವೆ? ನಮ್ಮ ಸೂರ್ಯನು ಈಗಿನ ಪ್ರಮಾಣದಲ್ಲಿ ಶಕ್ತಿಯನ್ನು





ವಿಕಿರಣಗೊಳಿಸಬೇಕಾದರೆ, ಪ್ರತಿ ಸೆಕೆಂಡಿಗೆ 588 ಬಿಲಿಯನ್ (ಸಹಸ್ರ ದಶಲಕ್ಷ) ಕಿಲೋಗ್ರಾಮ್‌ದಷ್ಟು ಹೈಡ್ರೋಜನ್ ಅನಿಲವು ಹೀಲಿಯಮ್ ಆಗಿ ಪರಿವರ್ತನೆಗೊಳ್ಳಬೇಕಾ ಗುತ್ತದೆ. ಈ ಮೊತ್ತವು ಸೂರ್ಯನ ದ್ರವ್ಯರಾಶಿಯ ($3X10^{-18}$) ದಷ್ಟು ಇಂಥ ಪರಿಸ್ಥಿತಿಯಲ್ಲಿ, ಸೂರ್ಯನು ಅನಂತ ಕಾಲದವರೆಗೆ ದಿಸೆಯಲ್ಲಿ ವಿಚಾರ ಮಾಡಿದ ಪ್ರಥಮ ವಿಜ್ಞಾನಿ ಹೆಲ್ಮೋಟ್ಝ ಭವಿಷ್ಯದ ಒಂದು ದಿನ ಶಕ್ತಿಯ ಪೂಜ್ರ್ಯಕೆಯು ಶೂನ್ಯವಾಗಲೇಬೇಕು. ಸೂರ್ಯನ ಈಗಿನ ಆಯುಸ್ಸು 4.6 ಬಿಲಿಯನ್ (ಸಹಸ್ರ ದಶಲಕ್ಷ) ವರ್ಷಗಳು. ಈ ಅವಧಿಯಲ್ಲಿ ಪೂರ್ವದ ಪ್ರಾರಂಭದಲ್ಲಿ ಸೂರ್ಯಗೋಲವು ಸಂಪೂರ್ಣವಾಗಿ ಹೈಡ್ರೋಜನ್ ಅನಿಲದಿಂದ ತುಂಬಿತ್ತೆಂದೂ ತಿಳಿದರೂ, ಆಗಿನ (1/20) ಇಪ್ಪತ್ತರಲ್ಲಿ ಒಂದಂಶದಷ್ಟು ಹೈಡ್ರೋಜನ್ ಇಂಧನವು ಉಪಯೋಗಿಸಲ್ಪಟ್ಟು ವ್ಯಯವಾಗಿದೆ. ಈ ಲೆಕ್ಕಾಚಾರದಂತೆ ಸೂರ್ಯನ ಇನ್ನುಳಿದ ಆಯಸ್ಸು 87 ಇಯಾನ್ ವರ್ಷಗಳೆಂದು ಮುನ್ಸೂಚನೆಯಾಗುತ್ತದೆ. ಆದರೆ ಸೂರ್ಯನು(1) ಪ್ರಾರಂಭದಲ್ಲಿ ಸಂಪೂರ್ಣ ಹೈಡ್ರೋಜನ್ ತುಂಬಿದ ಗೋಲವಾಗಿರಲಿಲ್ಲ. (2) ಮಹಾಸ್ಫೋಟದಿಂದ ವಿಶ್ವವು ನಿರ್ಮಾಣವಾದಾಗ ಹೀಲಿಯಮ್ ಸಾಕಷ್ಟು ಪ್ರಮಾಣದಲ್ಲಿತ್ತು. ಅಲ್ಲದೇ (3) ಮಹಾಸ್ಫೋಟವಾದ 10 ಹತ್ತು ಇಯಾನ್ ನಂತರ ಸೂರ್ಯನು ನಿರ್ಮಾಣಗೊಂಡಿದ್ದು. ಹೊಸದಾಗಿ ನಿರ್ಮಾಣಗೊಂಡ ಸೂರ್ಯದಲ್ಲಿ ಪ್ರತಿಶತ 80 ರಷ್ಟು ಹೈಡ್ರೋಜನ್ ಹಾಗೂ 75% ಪ್ರತಿಶತ ಹಾಗೂ ಹೀಲಿಯಮ್ 25% ಪ್ರತಿಶತದಷ್ಟು ಸೂರ್ಯನಲ್ಲಿ ಈಗಿರುವ ಹೈಡ್ರೋಜನ್ ಸಂಗ್ರಹವು ಪ್ರಸ್ತುತ ವೇಗದಲ್ಲಿ ವ್ಯವಾಗುತ್ತ ಹೋದಲ್ಲಿ ಸಂಗ್ರಹ ಶೂನ್ಯವಾಗುವವರೆಗೆ ಸೂರ್ಯನು ಬೆಳಗುವುದು 67 ಅರವತ್ತೇಳು ಇಯಾನ್ ವರ್ಷಗಳ ಅವಧಿಯವರೆಗೆ.

ಈ ಅರವತ್ತೇಳು ಇಯಾನ್ ವರ್ಷಗಳ ಅವಧಿಯ ಅಂದಾಜು ಸರಿ ಎನಿಸುವುದಿಲ್ಲ. ಸೂರ್ಯನ ಇನ್ನುಳಿದ ಆಯಸ್ಸು ಅದರ ತಿರುಳು ಗರ್ಭದ (Core) ದ ಬೀಜೋಷ್ಣ ಪ್ರತಿಕ್ರಿಯೆ (Thermo-nuclear reactions) ಗಳನ್ನು ಅವಲಂಭಿಸಿದೆ. ಹೈಡ್ರೋಜನ್ ಸಮ್ಮಿಳನ (Hydrogen fusion) ಮುಂದುವರೆದಂತೆ, ಹೀಲಿಯಮ್ ಉತ್ಪನ್ನವಾಗಿ, ಅದರ ತಿರುಳು ಗರ್ಭದಲ್ಲಿಯ ಹೀಲಿಯಮ್ ಪ್ರಮಾಣವು ಹೊರಪದರುಗಳಲ್ಲಿಯ ಪ್ರಮಾಣಕ್ಕಿಂತ ಹೆಚ್ಚಾಗುತ್ತದೆ. ಪರಿಣಾಮವಾಗಿ ತಿರುಳು ಗರ್ಭದ ಸಾಂದ್ರತೆಯು ಹೊರ ಪದರುಗಳ ಸಾಂದ್ರತೆಗಿಂತ ಹೆಚ್ಚಾಗುತ್ತ ಸಂಕುಚಿಸಿ ಉಷ್ಣತೆಯು ಹೆಚ್ಚಾಗುತ್ತ ಹೋಗುತ್ತದೆ. ಕೇಂದ್ರ ಗರ್ಭದಲ್ಲಿಯ ಉಷ್ಣತೆಯ ಏರಿಕೆಯು ಅಲ್ಲಿ ಹೀಲಿಯಮ್‌ನ ಬೀಜಾಣು ಸಮ್ಮಿಳನ (Nuclear Fusion) ಗೊಳಿಸಿ ಹೆಚ್ಚು ಭಾರದ ಪರಮಾಣುಗಳಾಗಿ ಪರಿವರ್ತಿಸಿ ಉಷ್ಣತೆಯನ್ನುಂಟು ಮಾಡುತ್ತದೆ. ಹೆಚ್ಚಿದ ಉಷ್ಣತೆಯು ಸೂರ್ಯನನ್ನು ಬೃಹತ್ಪ್ರಮಾಣದಲ್ಲಿ ಪ್ರಸರಣಗೊಳಿಸಲು ಕಾರಣವಾಗುತ್ತದೆ.

ಹೀಗೆ ಸೂರ್ಯನು ಈಗಿರುವ ಗಾತ್ರದ ದಶಲಕ್ಷ ಪಟ್ಟು ದೊಡ್ಡ ಗಾತ್ರಕ್ಕೆ ಪ್ರಸರಣಗೊಳ್ಳುತ್ತದೆ. ಪ್ರಸರಣಗೊಂಡ ಸೂರ್ಯನ ಹೊರಮೈ ಕ್ಷೇತ್ರವು ಮೊದಲಿದ್ದಕ್ಕಿಂತ ದೊಡ್ಡ ಪ್ರಮಾಣದ್ದಾಗಿರುತ್ತದೆ. ಹೆಚ್ಚಿದ ಕ್ಷೇತ್ರದ ಹೊರಮೈ ಉಷ್ಣತಾ ಮಾನವು ಬರೀ ಕೆಂಪು ವರ್ಣದ ಉಷ್ಣತೆಗೆ ತಂಪಾಗಿಸುತ್ತದೆ. ಪ್ರಸರಣಗೊಂಡ ಸೂರ್ಯನ ಹೊರಮೈ ಕ್ಷೇತ್ರದಿಂದ ಹೊರ ಹೊಮ್ಮಿದ ವಿಕಿರಣವು ಬೃಹತ್ಪ್ರಮಾಣದ್ದಾಗಿರುತ್ತದೆ. ಈ ಹಂತದಲ್ಲಿಯ ಸೂರ್ಯನನ್ನು ಕೆಂಪು ದೈತ್ಯನೆಂದು ಕರೆಯುತ್ತಾರೆ. ಈಗಾಗಲೇ ಈ ಹಂತದಲ್ಲಿರುವ ನಕ್ಷತ್ರಗಳಾದ ಬೀಟಲ್‌ಗೀಜ, ಅಂಟಾರಿಸಾ ಮತ್ತು ಮೀರಾ ಇವು ಇತರ ಕೆಂಪು ದೈತ್ಯಗಳಾಗಿವೆ.

ಪ್ರಸರಣಗೊಂಡ ಕೆಂಪು ದೈತ್ಯ ಸೂರ್ಯನು ಪೃಥ್ವಿಯನ್ನು ಸುಟ್ಟು ಹಾಕಿ ಧ್ವಂಸ ಮಾಡುವನು. ಸೂರ್ಯ ತನ್ನ ಪಥದ ಮುಖ್ಯ ವಾಹಿನಿಯಲ್ಲಿರುವಾಗ ಮಾತ್ರ ಪೃಥ್ವಿಯು ವಾಸಯೋಗವಾಗಿರುತ್ತದೆ. ಅಂದರೆ, ಹೈಡ್ರೋಜನ್ ಬೀಜಾಣುಗಳು ಸಮ್ಮಿಳನಗೊಂಡು ಹೀಲಿಯಮ್ ಆಗಿ ಪರಿವರ್ತನೆಗೊಳ್ಳುತ್ತಿರುವಾಗ ಮಾತ್ರ. ಅಂದರೆ ಈಗ ಮಧ್ಯ ವಯಸ್ಸಿನಲ್ಲಿರುವ ಸೂರ್ಯನ ಆಯಸ್ಸು ಇನ್ನು 5–6 ಐದು ಅಥವಾ ಆರು ಬಿಲಿಯನ್ (ಸಹಸ್ರ ದಶಲಕ್ಷ) ವರ್ಷಗಳವರೆಗೆ ಮಾತ್ರ ಪೃಥ್ವಿಯು ವಾಸಯೋಗ್ಯವಾಗಿರುತ್ತದೆ.

ಈಗ ಹೇಳಿದಂತೆ ಅಪಾರ ಕಾಲದವರೆಗೆ ಪವಾಡ ಸದೃಶ ಕಾರ್ಯವಾದ ಪೃಥ್ವಿಯ ವಾಸ ಯೋಗ್ಯತೆಯು ಸರ್ವಶಕ್ತನಾದ ಪರಮಾತ್ಮನಿಂದ ಸಾಧ್ಯವಾಗಿರಬೇಕೆಂದು ಹೊಳೆದು ಅಕ್ಕನು 'ನಾನು ಆತನರಿದು ಶರಣೆಂದು ಬದುಕಿದೆನು' ಎಂದಿದ್ದಾರೆ. ಬೆಟ್ಟದ ಮೇಲೆ ಅನೇಕ ವಸ್ತುಗಳನ್ನು ಕಂಡು ಚರಿಸುತ್ತಿದ್ದೇನೆ. ಎಂದೂ ಹೇಳಿದ್ದು, ಶಕ್ತಿಯ ಉಪಯೋಗದಿಂದ ನಾವು ಭೂಮಿಯ ಮೇಲೆ ಅನೇಕ ವಸ್ತುಅಗ್ಗನ್ನು ಉತ್ಪಾದಿಸಿ ಪೃಥ್ವಿಯು ವಾಸಯೋಗ್ಯವಾಗುವಂತೆ ಮಾನವನು ಮಾಡಿದ್ದನ್ನೇ ಅಕ್ಕನು 12ನೇ ಶತಮಾನದಲ್ಲಿ ವ್ಯಕ್ತಪಡಿಸಿದ್ದಾರೆ ಎನಿಸುತ್ತದೆ ಎಂದೆನ್ನಬಹುದಲ್ಲವೆ.

### ಶ್ರೀವಾಣಿ

ಮಾನವನ ಶಕ್ತಿ ಕ್ರಿಯಾಶೀಲವಾಗದ ಹೊರತು ಜೀವನ ಸುಂದರವಾಗಲಾರದು. ಜನ ಜಾಗೃತರಾಗಬೇಕು. ತಮ್ಮಲ್ಲಿ ಹುದುಗಿರುವ ಸಂಪತ್ತನ್ನಿ ರಾಷ್ಟ್ರದ ಪ್ರಗತಿಗೆ, ಮಾನವ್ಯದ ಸಂವರ್ಧನೆಗೆ ವಿನಿಯೋಗಿಸುವ ವಿಚಾರಶೀಲರಾಗಬೇಕು.

# ಏಪ್ರಿಲ್ ತಿಂಗಳಲ್ಲಿ ಬರುವ ಮಹತ್ವದ ದಿನಗಳು

–ಶಕುಂತಲ ಯು. 'ಜ್ಯೋತಿರ್ಲಿಂಗ', ೧ನೇ ಕ್ರಾಸ್, ಹೈಸ್ಕೂಲ್ ಬಡಾವಣೆ, ಹೊನ್ನಾಳಿ–೫೭೭ ೨೧೭.

**ಏಪ್ರಿಲ್ –೨ 'ಧ್ವಜ ದಿನಾಚರಣೆ' :**

ಈ ದಿನಾಚರಣೆ ಮಹತ್ವ ಎಂದತೆ ಪೋಲೀಸ್ ಧ್ವಜ ಗಳನ್ನು ಖರೀಸಿರುವುದರಿಂದ ಪೋಲೀಸ್‌ರ ಕಲ್ಯಾಣನಿಧಿಗೆ ಸಹಾಯ ಮಾಡಿದಂತಾಗುತ್ತದೆ. ರಾಜ್ಯದೊಳಗಿನ ಶಾಂತಿಪಾಲನೆಗೆ, ಕಾನೂನುಗಳ ಪಾಲನೆಗೆ, ರಕ್ಷಣೆಗೆ, ಪೋಲೀಸರು ಅತ್ಯವಶ್ಯ. ಇವರು ಇಪ್ಪತ್ನಾಲ್ಕು ಗಂಟೆಗಳ ಸರಕಾರಿ ನೌಕರರು. ಗಾಳಿ, ಮಳೆ, ಚಳಿ, ಬಿಸಿಲು ಲೆಕ್ಕಿಸದೆ ಸೇವೆಗೈಯುತ್ತಾರೆ. ಕಳ್ಳರು, ವಂಚಕರು, ದರೋಡೆ ಕೋರರು, ಕೊಲೆ ಪಾತಕಿಗಳು, ರೌಡಿಗಳು, ಖೋಟಾ ನೋಟು ಚಲಾವಣೆದಾರರು, ಕಳ್ಳಭಟ್ಟಿ ತಯಾರಕರು, ಆನೆದಂತಚೋರರು, ಅರಣ್ಯ ಸಂಪತ್ತು ದೋಚುವವರು, ಅಲ್ಲದೇ ಈಗ ಉಗ್ರಗಾಮಿಗಳು ಮುಂತಾದವರೊಡನೆ ಪ್ರಾಣವನ್ನು ಲೆಕ್ಕಿಸದೇ ಹೋರಾಡಬೇಕಾಗುತ್ತದೆ. ಕೆಲವು ಪೋಲೀಸರು ಹುತಾತ್ಮರು ಆಗಿದ್ದಾರೆ. ವಯೋವೃದ್ಧ, ಅಂಗವಿಕಲ, ವಿಧವಾ ಮತ್ತು ಅವಲಂಭಿತರಿಗೆ ಸಹಾಯ ಮಾಡುವುದು ಅವರ ಸಮಸ್ಯೆಗಳಿಗೆ ಪರಿಹಾರ ಕಲ್ಪಿಸುವುದು ಈ ವಿಷಯಗಳಿಗೆ ಹಣ ಸಂಗ್ರಹಿಸುವುದು ಮತ್ತು ಪೋಲೀಸ್ ಪಡೆಗೆ ಹೃತ್ಪೂರ್ವಕ ನಮನ ಸಲ್ಲಿಸುವುದು ಈ ದಿನಾಚರಣೆ ಉದ್ದೇಶ.

**ಏಪ್ರಿಲ್ –೫ 'ನಾವಿಕರ ದಿನಾಚರಣೆ' :**

ವ್ಯಾಪಾರದಲ್ಲಿ, ರಾಷ್ಟ್ರರಕ್ಷಣೆಯಲ್ಲಿ ತೊಡಗಿದವರೇ ನಾವಿಕ ಸೈನಿಕರು. ಇವರು ಹಲವು ಶತಕಗಳ ಹಿಂದೆ ಜಗತ್ತಿನಲ್ಲಿ ಹೊಸ ಸಮುದ್ರ ಮಾರ್ಗಗಳನ್ನು ಶೋಧಿಸಿದ್ದಾರೆ. ಅಮೆರಿಕಾ ಪತ್ತೆ ಹಚ್ಚಿದ ಕೋಲಂಬಸ್, ಭಾರತಕ್ಕೆ ಸಮುದ್ರ ಮಾರ್ಗ ಕಂಡುಹಿಡಿದ ವಾಸ್ಕೊ–ಡಿ–ಗಾಮ (1498 ಮೇ 20ರಂದು ಕಾಲಿಕಟ್‌ನ ಬಂದರಕ್ಕೆ ಬಂದನು) ವಿಶ್ವಪರ್ಯಟನೆಯ ಮೆಗೂನ್, ದಕ್ಷಿಣಧ್ರುವಕ್ಕೆ ಹೋದ ಸಾಹಸಿ ಆಮ್ಯುಂಡಸನ್, ಜೇಮ್ಸ್ ಕುಕ್, ಹೋದ ನ್ಯೂಜಿಲೆಂಡ್ ಇವರೆಲ್ಲ ಸಮುದ್ರ ಮಾರ್ಗ ಸಂಶೋಧಿಸಿದ ನಾವಿಕರು. ಇಂಥವರನ್ನು ಸ್ಮರಣಿಸುವುದು ನಾವಿಕರ ದಿನ. ಅದೇ ರೀತಿ ಹಲವಾರು ನೌಕಾ ಸೈನಿಕರು ನಮ್ಮ ದೇಶದ ಕರಾವಣಿ ತೀರವನ್ನು ರಕ್ಷಿಸುತ್ತಿದ್ದಾರೆ.

**ಏಪ್ರಿಲ್ –೭ 'ವಿಶ್ವ ಆರೋಗ್ಯ ದಿನಾಚರಣೆ' :**

ವಿಶ್ವಸಂಸ್ಥೆಯ ವಿಶ್ವ ಆರೋಗ್ಯ ಸಂಸ್ಥೆಯಿಂದ(WHO) ಈ ದಿನಾಚರಣೆ ಆಚರಿಸಲಾಗುತ್ತದೆ. ಕಡುಬಡತನ. ನಿರಕ್ಷರತೆ, ಅಜ್ಞಾನ, ಮೂಢನಂಬಿಕೆ, ಅಂಟುಜಾಡ್ಯ, ದೀರ್ಘಕಾಲದ ಅನಾರೋಗ್ಯ, ಇವೆಲ್ಲವುಗಳಿಂದ ಗ್ರಾಮೀಣ ಜನತೆ ಆರೋಗ್ಯ ವಂಚಿತರಾಗಿದ್ದಾರೆ. ಭಾರತದಲ್ಲಿ ಹಲವು ದಶಕಗಳ ಹಿಂದೆ ಪ್ಲೇಗ್, ಗುದ್ದವ್ವನ ಬೇನೆ, (ಇನ್‌ಪ್ಲುಯೆಂಜಾ) ಸಿಡುಬು ಜನರಿಗೆ ಮಾರಕವಾಗಿದ್ದರೆ ಈಗ ಏಡ್ಸ್, ಹೆಚ್.ಐ.ವಿ. ಕಾಲರಾ, ಡೇಂಗೆಜ್ವರ ಮಾರಕವಾಗಿವೆ. ಪೋಲಿಯೋ ರೋಗ ಮಕ್ಕಳಿಗೆ ಪ್ರಾಣಾಂತಿಕವಾಗಿದೆ. ಜನರಲ್ಲಿರುವ ರಕ್ತಹೀನತೆ, ನರದೌರ್ಬಲ್ಯ, ಅಪೌಷ್ಟಿಕತೆ ಕಾರಣವಾಗಿದೆ ಇದರ ಜೊತೆಗೆ ಜನಸಂಖ್ಯಾ ಏರಿಕೆ, ನಗರದ ಕೊಳಚೆ ಪ್ರದೇಶಗಳು, ಗ್ರಾಮೀಣಮಟ್ಟದಲ್ಲಿ ಸಾರ್ವಜನಿಕ ನಲ್ಲಿ, ಬಾವಿ, ಕೆರೆಗಳಲ್ಲಿಯ ನೀರಿನ ಮಲಿನತೆ, ಅಶುದ್ಧತೆ, ಇವು ಅನಾರೋಗ್ಯದ ತೀವ್ರತೆಗೆ ಕಾರಣವಾಗಿವೆ. ಗರ್ಭಿಣಿಯರಿಗೆ, ಸ್ತ್ರೀಯರಿಗೆ ಮಕ್ಕಳ ಬಗ್ಗೆ ರೋಗ ನಿರೋಧಕ ಲಸಿಕೆಗಳ ಬಗ್ಗೆ ಹೆಚ್ಚು ತಿಳಿವಳಿಕೆ ನೀಡುವುದು ಅವಶ್ಯ. ವಿಶ್ವ ಆರೋಗ್ಯದ ದಿನದ ಉದ್ದೇಶ ಇವೆಲ್ಲ ನ್ಯೂನತೆಗಳನ್ನು ಹೋಗಲಾಡಿಸಿ ಎಲ್ಲರ ಆರೋಗ್ಯದ ಬಗ್ಗೆ, ಗಮನ ಕೊಡುವುದಾಗಿದೆ. ಆರೋಗ್ಯವೇ ಸಂಪತ್ತು, ಶುಚಿತ್ವವೇ ದೇವತ್ವ.

ಸಾಂಕ್ರಾಮಿಕ ರೋಗಗಳ ನಿರ್ಮೂಲನೆಗಾಗಿ, ಮನವ ಕುಲದ ಆರೋಗ್ಯ ಪಾಲನೆಗಾಗಿ, ಆರೋಗ್ಯಶಾಲಿ ಜಗತ್ತು ನಿರ್ಮಿಸುವುದಕ್ಕಾಗಿ WHO 1948ರಲ್ಲಿ ಅಸ್ತಿತ್ವಕ್ಕೆ ಬಂದಿದೆ. ಅದಕ್ಕಾಗಿ ವಿಶ್ವದಾದ್ಯಾಂತ ವೈದ್ಯರಿಗೆ ಬಂದಿದೆ. ಅದಕ್ಕಾಗಿ ವಿಶ್ವದಾದ್ಯಾಂತ ವೈದ್ಯರಿಗೆ ವಿಶೇಷ ತರಬೇತಿ, ಮಕ್ಕಳ ತಾಯಂದಿರ ಆರೋಗ್ಯ ಪಾಲನೆಯ ವಿಶೇಷ ಕ್ರಮಗಳು, ಆರೋಗ್ಯ ಶಿಕ್ಷಣ, ಮಾದಕ ವಸ್ತುಗಳಿಂದ ಆಗುವ ಹಾನಿ, ಏಡ್ಸ್ ತಡೆಗಟ್ಟುವ ವಿಧಾನ. ಕುಟುಂಬ ಯೋಜನೆ ಬಗ್ಗೆ ನವೀನ ತಂತ್ರಗಳು. ಈ ಎಲ್ಲ ಕಾರ್ಯಗಳನ್ನು ನೆರವೇರಿಸುತ್ತಲಿದೆ. ಇನ್ನೂ ಗ್ರಾಮಾಂತರ ಪ್ರದೇಶಗಳಲ್ಲಿ ಸಾಕಷ್ಟು ತಿಳಿವಳಿಕೆಯಿಂದ ಕಾರ್ಯಗಳು ಸಾಗಬೇಕಿದೆ.





**ಏಪ್ರಿಲ್ 14 : 'ಡಾ॥ ಅಂಬೇಡ್ಕರ್ ಜಯಂತಿ' :**

ಇಂದಿಗೆ ಸರಿಯಾಗಿ 117 ವರ್ಷಗಳ ಹಿಂದೆ ದಲಿತ ಸೂರ್ಯ ಉದಯಿಸಿದರು. ಭೀಮರಾವ್ ರಾಮ್‌ಜಿ ಸತ್ಪಾಲ್ ತಮ್ಮ ಪ್ರೀತಿಯ ಗುರುಗಳಾದ ಅಂಬೇಡ್ಕರ ಅವರಿಂದ ಅವರ ಹೆಸರನ್ನು ಪಡೆದು ವಿಶ್ವವಿಖ್ಯಾತರಾದರು. ಅಪಾರ ಪುಸ್ತಕ ಪ್ರೇಮಿ, ಡಾ॥ ಅಂಬೇಡ್ಕರ ಮೂಕನಾಯಕ, ಬಹಿಷ್ಕೃತ ಭಾರತ ಎಂಬ 2 ಪತ್ರಿಕೆಗಳನ್ನು ಸಂಪಾದಿಸಿದರು. ಅಸ್ಪೃಶ್ಯರ ಪರ ಹೋರಾಟ ನಡೆಸಿದ ಇನ್ನೊಬ್ಬ ಧೀಮಂತ. ಭಾರತ ಸಂವಿಧಾನಶಿಲ್ಪಿ ಮತ್ತು ಭಾರತದ ಮೊದಲ ಕಾನೂನು ಮಂತ್ರಿ ಅಂಬೇಡ್ಕರ ಮೊದಲ ಪತ್ನಿ ನಿಧನಾಂತರ ಡಾ॥ ಶಾರದಾ ಕಬೀರ್ ಅವರನ್ನು ಮದುವೆ ಆಗಿ 1956 ಅಕ್ಟೋಬರ್ 14ರಂದು ಬೌದ್ಧಮತ ಸೇರಿದರು.

ಅನೇಕ ಕೃತಿಗಳನ್ನು ರಚಿಸಿದರು. 1956 ಡಿಸೆಂಬರ್ 6ರಂದು ನಿಧನರಾದರು. ಸಾಮಾಜಿಕ ಕ್ರಾಂತಿಯ ಹರಿಕಾರರಾದರು.

**ಏಪ್ರಿಲ್ 18 : 'ವಿಶ್ವಪಿತ್ರಾರ್ಜಿತ ದಿನ' :**

ತಾತ ಮುತ್ತಾತರಿಂದ ಬಳುವಳಿಯಾಗಿ ಬಂದಿದ್ದು ಪಿತ್ರಾರ್ಜಿತ. ಇದರ ಮೇಲೆ ಅಧಿಕಾರವನ್ನು ಮೊಮ್ಮಕ್ಕಳು, ಮರಿಮಕ್ಕಳು ಪಡೆದುಕೊಂಡಿರುತ್ತಾರೆ. ಆಸ್ತಿಯಷ್ಟೇ ಪಿತ್ರಾರ್ಜಿತವಲ್ಲ. ಅವರು ಬೆಳೆಸಿ ಉಳಿಸಿಕೊಂಡು ಬಂದ ಸಂಪತ್ತನ್ನು ಮುಂದಿನ ಪೀಳಿಗೆಗೆ ಉಳಿಸಿಕೊಂಡು ಹೋಗಬೇಕು. ಹಿಂದೂಗಳಲ್ಲಿ ಮತ ವ್ಯಕ್ತಿಯ ಲಿಂಗದ ಆಧಾರದ ಮೇಲೆ ಬೇರೆ ಬೇರೆ ಉತ್ತರಾಧಿಕಾರಿ ಪ್ರಕ್ರಿಯೆ ಜಾರಿಗೆ ಬರುತ್ತದೆ. ಹಿಂದೂ ಉತ್ತರಾಧಿಕಾರಿ ಅಧಿನಿಯಮ 1956ರಲ್ಲಿ ಸ್ತ್ರೀ ವ್ಯಕ್ತಿತ್ವದ ವಿಕಾಸದ ದಿಶೆಯಲ್ಲಿ ಕ್ರಾಂತಿಕಾರ ಹೆಜ್ಜೆ ಇಟ್ಟಿತು.

**ಏಪ್ರಿಲ್ 23 : 'ವಿಶ್ವಪುಸ್ತಕ ದಿನ ' :**

ಪ್ರಪಂಚದ ಶ್ರೇಷ್ಠ ನಾಟಕಕಾರ ವಿಲಿಯಂ ಶೇಕ್ಸ್‌ಪಿಯರ್ ಜನಿಸಿದ್ದು 23–04–1564ರಲ್ಲಿ. ಮೊದಲ ಕೃತಿ ವೀನಸ್ ಆ್ಯಂಡ್ ಅಡೋನಿಸ್, ಕೊನೆಯ ಕೃತಿ ದಿ ಟೆಂಪೆಸ್ಟ್ ನಾಟಕ. ಓಥೆಲೋ, ಜೂಲಿಯಸ್ ಸೀಸರ್ ಮೂಲ ಕೃತಿ ಪ್ರಸಿದ್ಧವಾದವುಗಳು.

ಕ್ರಿ.ಪೂ. 3500 ವರ್ಷಗಳ ಹಿಂದೆ ಗ್ರೀಕ್‌ರು ಪ್ಯಾಪಿರಸ್ ಎಂಬ ಹುಲ್ಲಿನ ಹಾಳೆಯ ಮೇಲೆ ಬರೆದು ಸುರುಳಿಯಾಗಿ ಸುತ್ತಿ ಇಡುತ್ತಿದ್ದರು. ಹತ್ತನೆಯ ಶತಮಾನದಲ್ಲಿ ಪಂಪ, ರನ್ನ, ಪೊನ್ನ, ಹನ್ನೆರಡನೆಯ ಶತಮಾನದ ನಾಗಚಂದ್ರ, ಹನ್ನೆರಡನೇ ಶತಮಾನದ ಹರಿಹರ, ವಚನಸಾಹಿತ್ಯ, ಹದಿಮೂರನೇ ಶತಮಾನದ ರಾಘವಾಂಕ, ಜನ್ನ, ಹದಿನೈದರಲ್ಲಿ ಕುಮಾರವ್ಯಾಸ. ಹದಿನಾರರಲ್ಲಿ ಲಕ್ಷ್ಮೀಶ, ರತ್ನಾಕರವರ್ಣಿ, ದಾಸ ಸಾಹಿತ್ಯ, ಸರ್ವಜ್ಞ ಇವರೆಲ್ಲ ಕನ್ನಡ ನಾಡಿನ ಕೊಡುಗೆಗಳು.

1995ರಿಂದ ವಿಶ್ವಸಂಸ್ಥೆಯ ಯುನೆಸ್ಕೋ ಏಪ್ರಿಲ್ 23 ರಿಂದ ವಿಶ್ವ ಪುಸ್ತಕ ದಿನಾಚರಣೆ ಅರಂಭಿಸಿತು.

## ವಚನಗಳು

'ಜಗದಗಲ ಮಂಟಪಕ್ಕೆ ಮುಗಿಲಗಲದ
ಮೇಲುಕಟ್ಟಿನಲ್ಲಿ
ಚಿತ್ರವಿಚಿತ್ರವ ನೋಡುತ್ತ ಧ್ಯಾನ ವಿಶ್ರಾಂತಿಯಲ್ಲಿ
ದಿಟ ದಿಟವೆಂಬುದೊಂದು ದರ್ಶನವ ನೋಡುತ್ತ
ನೋಡುತ್ತ
ಗಗನ ಗಂಭೀರದಲ್ಲಿ ಉದಯವಾಯಿತ್ತ ಕಂಡೆ.
ಗುಹೇಶ್ವಲಿಂಗ ತಾನೆಯಾಗಿ!'

* * *

ನೀನೆನಗೆ ಗುರುವಪ್ಪೊಡೆ ನಾ ನಿನಗೆ ಶಿಷ್ಯನಪ್ಪೊಡೆ
ಎನ್ನ ಕಾಯದ ಕರ್ಮವ ತೊಡೆದು, ಎನ್ನ
ಕರಣಾದಿ ಗುಣಂಗಳ ಕಳೆದು ನೀನೆನ್ನ ಕಾಯದಲ್ಲಿ
ಅಡಗಿ, ನೀನೆನ್ನ ಪ್ರಾಣದಲ್ಲಿ ಅಡಗಿ, ನೀನೆನ್ನ
ಭಾವದಲ್ಲಿ ಅಡಗಿ, ನೀನೆನ್ನ ಕರಸ್ಥಳಕ್ಕೆ ಬಂದು
ಕಾರುಣ್ಯವ ಮಾಡು, ಗುಹೇಶ್ವರಾ !

–ಅಲ್ಲಮಪ್ರಭು

* * *

ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು;
ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ !
ಇದರಂತುವನಾರು ಬಲ್ಲರಯ್ಯಾ ?
ನಿಮ್ಮ ಸತ್ಯ ಶರಣರ ಸುಳುಹು
ತೋರುತ್ತಿದೆಯಯ್ಯ!
ನಿಮ್ಮ ಶರಣ ಬಸವಣ್ಣನ ಕಾಂಬೆನೆಂಬ ತವಕವೆನ
ಗಾಯಿತ್ತು ಕೇಳಾ, ಚೆನ್ನಮಲ್ಲಿಕಾರ್ಜುನಾ!

–ಅಕ್ಕಮಹಾದೇವಿ

# ವೈಜ್ಞಾನಿಕ ವಿಶ್ಲೇಷಣೆಯಂತೆ ಶರೀರಕ್ಕೆ ನೀರು

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೯, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨.

- ಮುಂದುವರೆದ ಭಾಗ

ನೀರು ಬರೀ $H_2O$ ಅಲ್ಲ. ಅದಕ್ಕಿಂತಲೂ ಹೆಚ್ಚು. $H_2O$ ನೀರಿನ ಸಂಕೇತ ಮಾತ್ರ. ನೀರಿನ ಚರಿತ್ರೆ ಮನುಷ್ಯನಿಗಿಂತಲೂ ಹಿಂದಿನದು. ಐದುನೂರು ಕೋಟಿ ವರ್ಷಗಳ ಹಿಂದೆ ಇನ್ನೂ ಯಾವ ಪ್ರಾಣಿಯೂ ಹುಟ್ಟಿರಲಿಲ್ಲ. ಹೀಗೆ ಭೂಮಿಯಲ್ಲಿ ಬರೀ ನೀರಿತ್ತು. ಎಲ್ಲೆಲ್ಲೂ ನೀರಿತ್ತು. ಅದರಲ್ಲಿ ಒಂದು ಏಕಕೋಶಜೀವಿಯ ಜನನ. ಸಮುದ್ರದ ಉಪ್ಪು ನೀರು, ಅದರಲ್ಲಿ ಕರಗಿದ ಆಮ್ಲಜನಕ, ಜತೆಗೆ ಸೂರ್ಯನ ಶಾಖ, ಇವು ಮೂರೂ ಏಕಕೋಶಜೀವಿಯ ಹುಟ್ಟು ಮತ್ತು ಬೆಳವಣಿಗೆಗೆ ಸಹಾಯ ಮಾಡಿದವು. ಆಹಾರ ಮತ್ತು ಆಮ್ಲಜನಕ ಅದಕ್ಕೆ ನೀರಿನಿಂದಲೇ ಸಿಕ್ಕುತ್ತಿತ್ತು. ಅದು ಬಿಟ್ಟ ಕಸವೂ ಸಹ ನೀರಿಗೇ ಸೇರುತ್ತಿತ್ತು. ಅಥವಾ ಅದನ್ನು ಹೀಗೂ ಹೇಳಬಹುದು, ನೀರು ಅದರ ಕಸ ತೆಗೆಯುವ ಅಂಗದ ಕೆಲಸವನ್ನೂ ಮಾಡುತ್ತಿತ್ತು. ಮುಂದೆ ಏಕಕೋಶಜೀವಿಯು ಬೆಳೆದು ಪ್ರಾಣಿ ಹಾಗೂ ಮಾನವನಾದ ಮೇಲೆ ಆಹಾರ ಮತ್ತು ವಿಸರ್ಜನೆಯ ಕೆಲಸವನ್ನು ಸಮುದ್ರದ ನೀರಿನ ಬದಲು ರಕ್ತ, ಹಾಲ್ರಸ ಮತ್ತು ಊತಕ ರಸಗಳು ಮುಂತಾದವು ಮಾಡಲು ಯೋಜಿಸಲ್ಪಟ್ಟವು. ಅಂದರೆ ಸಮುದ್ರದ ವಾತಾವರಣ ಮನುಜನ ಶರೀರದ ಒಳಗೇ ಏರ್ಪಟ್ಟಿತು. ಭೂಮಿಯ ಮುಕ್ಕಾಲು ಭಾಗ ನೀರು ಇರುವಂತೆ ಶರೀರದ ಮುಕ್ಕಾಲು ಭಾಗವೂ ನೀರೇ!

ಬೆಳಗಿನಲ್ಲಿ ಯಾರಾದರೂ ಇಬ್ಬರು ಸೇರಿದರೆ ಮೊದಲ ಪ್ರಶ್ನೆ 'ತಿಂಡಿ ಆಯ್ತೆ? ಎಂಬುದೇ ವಿನಃ 'ನೀರು ಕುಡಿದಿರಾ?' ಎಂದು ಯಾರೂ ಕೇಳುವುದಿಲ್ಲ. 'ಕಾಫಿ ಆಯ್ತೇ?' ಎಂದು ಕೇಳುವುದು ಸಾಮಾನ್ಯ. ಘನ ಅಂಶಕ್ಕಿಂತ ಹೆಚ್ಚಿಗೆ ಇರುವ ನೀರಿನ ಬಗ್ಗೆ ಯಾರೂ ಪ್ರಶ್ನಿಸುವುದೂ ಇಲ್ಲ. ಚಿಂತೆಯೂ ಇಲ್ಲ. ಹಿಂದೆ ಮನೆಗೆ ಬಂದವರಿಗೆ ಮೊದಲ ಆತಿಥ್ಯ ನೀರು. ಕೆಲವು ಕಡೆ ಬೆಲ್ಲ ಮತ್ತು ನೀರನ್ನು ಕೊಟ್ಟು ಆಹ್ವಾನಿಸುತ್ತಿದ್ದರು. ಈಗ ಕಾಫಿಯೋ ಅಥವಾ ಮತ್ಯಾವುದೋ ಕೂಲ್ ಡ್ರಿಂಕ್ಸ್‌ನಿಂದ ಪ್ರಾರಂಭವಾಗುತ್ತದೆ ಅತಿಥಿ ಸತ್ಕಾರ. ಯಾವ ನೀರು ನಮ್ಮ ಘನಾಹಾರಕ್ಕಿಂತ ಮುಖ್ಯವಾದದ್ದೋ ಅದರ ಬಗ್ಗೆ ನಮಗೆ ಇತ್ತೀಚೆಗೆ ಹೇಳಿಕೊಳ್ಳುವ ಒಳ್ಳೆಯ ಭಾವನೆಯೇ ಇಲ್ಲ. ಬಾಯಾರಿದಾಗಲೂ ಬೇರೆಯ ಪಾನೀಯಗಳಿಂದ ಅದನ್ನು ತೃಪ್ತಿಪಡಿಸಿಕೊಳ್ಳುವ ಹವಣಿಕೆ.

ದೇಹದ ಪ್ರತಿ ನೂರು ಗ್ರಾಂ ತೂಕಕ್ಕೆ ಎಪ್ಪತ್ತು ಗ್ರಾಂ ತೂಕ ನೀರು.

ಯಾವ ಯಾವ ಅಂಗಗಳಲ್ಲಿ ಎಷ್ಟೆಷ್ಟು ಭಾಗ ನೀರು ?

| ಶರೀರದ ಅಂಗಗಳು | ನೀರಿನ ಭಾಗ |
|---|---|
| ಮೂಳೆ | 22% |
| ಹಲ್ಲು | 10% |
| ಮಾಂಸ ಖಂಡಗಳು | 75% |
| ಮೆದುಳು | 77% |
| ಕೀಲುಗಳ ಸಂಧಿ | 80.5% |
| ರಕ್ತ | 83% |
| ಹಾಲ್ರಸ | 96% |
| ಲಾಲಾರಸ | 99.5% |
| ಜಠರರಸ | 97.5% |
| ಪಿತ್ತರಸ | 88% |
| ಮೇದೋಜೀರಕ ರಸ | 90% |
| ಮೂತ್ರ | 93% |
| ಬೆವರು | 56% |

ಶರೀರದ ಎಲ್ಲಾ ಒಳ ಅಂಗಗಳೂ ಸಹ ನೀರಿನಿಂದ ಕೂಡಿದೆ.

ನಾವು ಕುಡಿದ ನೀರಿನ ಜೊತೆಯಲ್ಲಿಯೇ ಹೋಗೋಣ. ಅದು ಏನೇನು ಆಗುತ್ತದೆ ಎನ್ನುವುದನ್ನು ಕೊಂಚ ವೀಕ್ಷಿಸೋಣ. ನೀರು ಬಾಯಿಯಲ್ಲಿ ಹೀರಲ್ಪಡುವುದಿಲ್ಲ. ಜಠರದಲ್ಲಿಯೂ ಸಹ. ಸಣ್ಣ ಕರುಳಿನಲ್ಲಿ ಸ್ವಲ್ಪ ಭಾಗ ಹೀರಲ್ಪಡುತ್ತದೆ. ಉಳಿದ ಹೆಚ್ಚು ಭಾಗವು ದೊಡ್ಡ ಕರುಳಿನಲ್ಲಿ ಹೀರಲ್ಪಡುತ್ತದೆ. ದೊಡ್ಡ ಕರುಳಿಗೆ ಅವಸರವಿಲ್ಲ, ನಿಧಾನವಾಗಿ ಹನ್ನೆರಡರಿಂದ ಇಪ್ಪತ್ನಾಲ್ಕು ಗಂಟೆಗಳಲ್ಲಿ ಹೀರುತ್ತದೆ. ಈ ಮಧ್ಯೆ ಒತ್ತಡ, ಭಯ, ಚಿಂತೆ, ಔಷಧಗಳು, ಕ್ರಿಮಿಗಳು ಈ ನೀರನ್ನೂ ಸಹ ಹೀರದೆಯೇ ಹಾಗೆಯೇ ಹೊರಕ್ಕೆ ದಬ್ಬಿ ಬಿಡಬಹುದು. ಹಾಗೆ ದೂಡುವುದಕ್ಕೆ 'ಭೇದಿ' ಎಂಬ ರೋಗದ ಹೆಸರಿಟ್ಟಿದ್ದಾರೆ. ಅಂದರೆ ದೊಡ್ಡ ಕರುಳಿನಲ್ಲಿ ನೀರು ಸರಿಯಾಗಿ ಹೀರಲ್ಪಟ್ಟಿಲ್ಲವೆಂದು ಅದರ ಅರ್ಥ. ಇದಕ್ಕೆ ವ್ಯತಿರಿಕ್ತವಾಗಿ ಮಲವು ಇಪ್ಪತ್ತನಾಲ್ಕು ಗಂಟೆಗಳಿಗಿಂತ ಹೆಚ್ಚು ಹೊತ್ತು ಕೋಲನ್‌ನಲ್ಲಿ ಉಳಿದು ನೀರು ಹೆಚ್ಚು ಹೀರಲ್ಪಟ್ಟು ಮಲವು ಗಟ್ಟಿಯಾದರೆ ಅದನ್ನು 'ಮಲಬದ್ಧತೆ' ಎಂದು ಮತ್ತೊಂದು ತೊಂದರೆಯಾಗಿ ಗುರುತಿಸುತ್ತಾರೆ.

ಆಹಾರದ ಜೀರ್ಣಕ್ರಿಯೆಯ ಜೊತೆಯಲ್ಲಿಯೇ ನೀರೂ ಸಹ ಸೇರಿ ಕೆಲಸ ಮಾಡಬೇಕು. ಬಾಯಿಯಲ್ಲಿನ ಜೊಲ್ಲು, ಇದಿಲ್ಲದೆ ಆಹಾರವನ್ನು ನುರಿಸಲೇ ಸಾಧ್ಯವಿಲ್ಲ. ಇದು 99.5% ನೀರೇ ಆಗಿದೆಯಲ್ಲವೇ? ಒಂದು ದಿನಕ್ಕೆ ಮನುಷ್ಯ ಸುರಿಸುವ ಜೊಲ್ಲಿನ ಪ್ರಮಾಣ ಸುಮಾರು 2ಲೀಟರ್. ಇಲ್ಲಿಂದ ಮುಂದೆ ಜಠರಕ್ಕೆ ಹೋದ ಆಹಾರ ಕಡೆಯಲ್ಪಡಬೇಕು. ಮಿಕ್ಸಿಗಾಗಲಿ, ಗ್ರೈಂಡರ್‌ಗಾಗಲಿ ನೀರು ಹಾಕದೆ ಕೆಲಸ ಮಾಡಿಸಿಕೊಳ್ಳಲು ಸಾಧ್ಯವೇ? ಅದೇ ರೀತಿ ಜಠರಕ್ಕೂ ನೀರು ಬೇಕು. ಜಠರ ರಸವು ಈ ಕೆಲಸವನ್ನು ಪೂರೈಸುತ್ತದೆ. ಈ ರಸದಲ್ಲಿನ ನೀರಿನ ಪ್ರಮಾಣ ಶೇ. 97.5 ಭಾಗ. ಒಂದು ದಿನಕ್ಕೆ ಸುಮಾರು ಲೀಟರಿನಷ್ಟು ಜಠರ ರಸ ಉತ್ಪತ್ತಿಯಾಗುತ್ತದೆ. ಸಣ್ಣ ಕರುಳಿಗೆ ಸುಮಾರು 2 ಲೀ. ನಷ್ಟು ಮೇದೋಜೀರಕ ರಸ, ಪಿತ್ತ ರಸ ಮುಂತಾದುವುಗಳು ಬಂದು ಸೇರುತ್ತವೆ. ಇವೆಲ್ಲಾ ಸೇರಿ ದಿನಕ್ಕೆ ಎಂಟು ಲೀ. ನಷ್ಟು ರಸಗಳಾಗುತ್ತವೆ. ಇವುಗಳೆಲ್ಲಾ ತಯಾರಾಗಲು ನೀರು ಬೇಕು. ಪ್ರತಿದಿನವೂ ನಮ್ಮ ಚರ್ಮದ ಮೂಲಕ, ನಾವು ಬಿಡುವ ಉಸಿರಿನ ಮೂಲಕ, ಮೂತ್ರದ ಮುಖಾಂತರ, ಮಲದ ಜೊತೆಯಲ್ಲಿ ನೀರು ಹೊರಕ್ಕೆ ಹೋಗುತ್ತಿರುತ್ತದೆ. ಈ ಎಲ್ಲಾ ನೀರನ್ನೂ ಹೊರಗಿನಿಂದ ಪೂರೈಸಬೇಕು.

ನಾವು ಶರೀರಕ್ಕೆ ನೇರವಾಗಿ ಕೊಡುವ ನೀರು ಒಂದು. ಮತ್ತೊಂದು ಆಹಾರದಿಂದ ಒದಗುವ ನೀರು, ಹಣ್ಣು, ತರಕಾರಿಗಳಲ್ಲಿ ನೀರಿನಂಶ ಇರುತ್ತದೆ. ಅಲ್ಲದೆ ಪ್ರೋಟೀನ್, ಎಣ್ಣೆ, ಹಿಟ್ಟುಗಳು ದಹನವಾಗುವಾಗ ನೀರು ಉತ್ಪತ್ತಿಯಾಗುತ್ತದೆ. ಕೊಬ್ಬನ್ನು ಸುಟ್ಟಾಗ ಪ್ರೋಟೀನ್, ಹಿಟ್ಟುಗಳಿಗಿಂತ ಹೆಚ್ಚು ನೀರು ಬರುತ್ತದೆ. 100ಗ್ರಾಂ ಎಣ್ಣೆ ಸುಟ್ಟಾಗ 97 ಗ್ರಾಂ ನೀರು ಬರುತ್ತದೆ. ಅದೇ 100 ಗ್ರಾಂ ಹಿಟ್ಟು ಸುಟ್ಟಾಗ 41 ಗ್ರಾಂ ನೀರು ಬರುತ್ತದೆ. ಪ್ರೋಟೀನ್ ಸುಟ್ಟಾಗ 55 ಗ್ರಾಂ ನೀರು ಬರುತ್ತದೆ. ನಾವು ಶರೀರದ ಒಳಕ್ಕೆ ತೆಗೆದುಕೊಳ್ಳುವ ನೀರು, ಹೊರಹಾಕುವ ನೀರು ತಮ್ಮ ಸಮತೋಲನವನ್ನು ಕಾಪಾಡಿಕೊಳ್ಳಬೇಕು. ನೀರು ಶರೀರದಲ್ಲಿ ರಸಾಯನಿಕ, ಜೈವಿಕ, ಹಾಗೂ ವಿದ್ಯುತ್ ಮುಂತಾದ ಕ್ರಿಯೆಗಳಲ್ಲಿ ಭಾಗವಹಿಸುತ್ತದೆ. ನೀರು ಆಹಾರದ ಜೀರ್ಣಕ್ರಿಯೆ, ಜೀವಸ್ತುಚಯ, ಸಾತ್ಮೀಕರಣ, ವಿಸರ್ಜನ ಎಲ್ಲದರಲ್ಲಿಯೂ ಭಾಗವಹಿಸಬೇಕು.

ಆಹಾರದ ಜೀರ್ಣಕ್ರಿಯೆಗೆ ಯಾವ, ಯಾವ ಹಂತದಲ್ಲಿ ಎಷ್ಟೆಷ್ಟು ನೀರು ಬೇಕೆಂಬುದನ್ನು ತಿಳಿದಾಯ್ತು. ಆಹಾರವು ಜೀವಕಣವಾಗುವ ಬಗೆಗೆ ಜೀವಸ್ತುಕರಣ (metabolism) ಎಂದು ಹೆಸರು ಇದರಲ್ಲಿ ಎರಡು ಭಾಗ. 1. ಜೀವಸ್ತುಚಯ - (Anabolism)= ಜೀವಕಣಗಳ ಹುಟ್ಟು ಮತ್ತು ಬೆಳವಣಿಗೆ. 2. ಜೀವಸ್ತುಲಯ - (Catabolism) = ಸತ್ತ ಜೀವಕಣಗಳು ಮತ್ತು ಎಲ್ಲಾ ಕ್ರಿಯೆಗಳಿಂದ ಉಂಟಾದ ಕೊಳೆಯನು ಹೊರಹಾಕುವಿಕೆ. ಜೀವಸ್ತುಚಯವು ಎಷ್ಟು ಮುಖ್ಯವೋ ಜೀವಸ್ತುಲಯವೂ ಅಷ್ಟೇ ಮುಖ್ಯ ಅಥವಾ ಅದಕ್ಕಿಂತ ಮುಖ್ಯ. ಕೊಳೆಯ ಹೊರದೂಡುವಿಕೆಯೇ ರೋಗವೆಂಬ ನಿಸರ್ಗೋಪಚಾರದ ನಿಲುವೇ ಅದು. ಕೊಳೆಯನ್ನು ಹೊರದೂಡುವಲ್ಲಿ ನೀರಿನ ಪಾತ್ರ ಮುಖ್ಯವೆಂದು ಹೇಳುವ ಅವಶ್ಯಕತೆ ಇದೆಯೇ?

ನೀರು ರಾಸಾಯನಿಕಗಳೊಂದಿಗೆ ಬೆರೆತು ಶರೀರದಲ್ಲಿ ಇರುತ್ತದೆ. ಈ ದ್ರವಗಳಲ್ಲಿ ಎರಡು ವಿಧ. ನಾಳಗಳಲ್ಲಿ ಹರಿಯುವವು, ಕಣಗಳ ಹಾಗೂ ಊತಕಗಳ ನಡುವೆ ಇರುವವು. ರಕ್ತ ಮತ್ತು ಹಾಲ್ರಸ (Lymph)ಗಳು ನರಗಳಲ್ಲಿ ಹರಿಯುವುವು. ಕಣಗಳ ನಡುವೆ ಬಣ್ಣವಿಲ್ಲದ ಊತಕ ರಸವಿರುವುದು. (Tissue Fluid). ಇದು ಅಂತರ ಕಣ ದ್ರವ. ನಮ್ಮ ಶರೀರದಲ್ಲಿನ 70% ನೀರಿನಲ್ಲಿ 2/3 ರಷ್ಟು ಜೀವಕಣಗಳಲ್ಲಿಯೂ 1/3 ಭಾಗ ಅವುಗಳ ನಡುವೆಯೂ ಇದೆ. ಒಟ್ಟಿನಲ್ಲಿ ನಮ್ಮ ಶರೀರದ ಒಳಗಿನ ಪ್ರತಿಯೊಂದು ಕಣವೂ ನೀರಿನಲ್ಲಿ ತೇಲುತ್ತಾ ಇದೆ. ಪ್ರತಿ ಕಣಗಳ ಒಳಗೂ ಸುತ್ತಲೂ ನೀರಿದೆ. ನೀರು ಹೀಗೆ ಹಂಚಲ್ಪಡಲು ಕೆಲವು ರಾಸಾಯನಿಕ ಕ್ರಿಯೆಗಳು ಅವಶ್ಯಕ. ಅವು ಹೇಗೆ ನಡೆಯುತ್ತದೆನ್ನುವುದನ್ನು ಸ್ಥೂಲವಾಗಿ ತಿಳಿದುಕೊಳ್ಳೋಣ.

ಈ ತಿಳಿವಳಿಕೆಯ ಅವಶ್ಯಕತೆಯೇನು? ಈ ಜ್ಞಾನ ಹೆಚ್ಚಿದಷ್ಟೂ ನಮಗೆ ನೀರಿನ ಅವಶ್ಯಕತೆಯ ಬಗ್ಗೆ ಅರಿವು ಉಂಟಾಗುತ್ತದೆ.

-ಮುಂದುವರೆಯುತ್ತದೆ.



# ದಾಸೋಹ ನಿಧಿ

## ಶ್ರೀ ಸಿದ್ಧಗಂಗಾ ಮಠದ ಶಾಶ್ವತ ದಾಸೋಹ ನಿಧಿಗೆ ಉದಾರವಾಗಿ ಕಾಣಿಕೆ ನೀಡಿದ ಮಹನಿಯರುಗಳು

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4656. | ಶ್ರೀ ಈ.ಎಸ್. ಪಾಲಾಕ್ಷ<br>ಸೆಕ್ಟಾರ್-19, ನೆಕುಲ್ ನೆವಿ, ಮುಂಬಯಿ. | 15,001.00 |
| 4657. | ಶ್ರೀ ಬಿ.ಎಸ್. ರಾಜಲಕ್ಷ್ಮಿ ಮತ್ತು ಮಕ್ಕಳು ಕೋಂ. ಶಾಂಭವಿ<br>ಕಾಫಿ ಪ್ಲಾಂಟರ್ಸ್, ಯಸಳೂರುಪೇಟೆ, ಹಾಸನ | 25,000.00 |
| 4658. | ಶ್ರೀ ನಂಜುಂಡಸ್ವಾಮಿಗಳು<br>ಗುರುವಣ್ಣದೇವರ ಮಠ, ಬೆಂಗಳೂರು. | 25,000.00 |
| 4659. | ಶ್ರೀ ತುಪ್ಪದ ಸಿ.ಆರ್. ವೀರಭದ್ರಯ್ಯ ಎಂ. ಹೇಮಾವತಮ್ಮ<br>ನಗರ್ತರಪೇಟೆ, ದೇವನಹಳ್ಳಿ ಟೌನ್, ಬೆಂ.ಗ್ರಾ.ಜಿ. | 1,101.00 |
| 4660. | ಶ್ರೀ ವೈ.ಎಂ. ಮಹಾದೇವಮ್ಮ ಪ್ರೊ. ನಂಜುಂಡೇಶ್ವರ ಸಾಮಿಲ್<br>ಕಾಲೇಜು ರಸ್ತೆ, ಟಿ. ನರಸೀಪುರ. | 2,101.00 |
| 4661. | ಶ್ರೀ ಎಂ.ಎಸ್. ರಾಜಕುಮಾರ್<br>ಕುಂದಲಹಳ್ಳಿ, ಬೆಂಗಳೂರು. | 5,000.00 |
| 4662. | ಶ್ರೀ ಎಲ್. ಶಿವಲಿಂಗಪ್ಪ ಕಲಾವಿದ್ಯಾಲಯ,<br>1ನೇ ಮೈನ್, ಬಸವನಗರ, ಬೆಂಗಳೂರು. | 2,000.00 |
| 4663. | ಶ್ರೀ ಬಿ.ಆರ್. ನಾಗಭೂಷಣ್<br>ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್, ಮಂಡ್ಯ. | 5,001.00 |
| 4664. | ಶ್ರೀ ಚಂದ್ರಶೇಖರಯ್ಯ<br>ಸುಂಕದಕಟ್ಟೆ, ಮಹದೇಶ್ವರ ನಗರ, ಬೆಂಗಳೂರು. | 1,001.00 |
| 4665. | ಶ್ರೀ ಸುಬ್ರಮಣ್ಯ ಎಂ. ಅರಳೆರೆ, ಕುಸುಮ ಅರಳೆರೆ,<br>ಪಿ.ಎಲ್. ಸೆಂಟರ್, ವಿಲ್ಲೇ, ಯು.ಎ. | 101 ಡಾಲರ್ |
| 4666. | ಶ್ರೀ ಜಯಮ್ಮ ಚನ್ನಬಸಪ್ಪ<br>ಜಯನಗರ (ಪಶ್ಚಿಮ)4ನೇ ಬ್ಲಾಕ್, ಬೆಂಗಳೂರು. | 10,000.00 |
| 4667. | ಡಾ॥ ಕೆ.ವಿ. ರಮೇಶ್ ಪ್ರಭ ಪಾಲೀ ಕ್ಲಿನಿಕ್,<br>ಬಸವನಗುಡಿ, ಬೆಂಗಳೂರು. | 1,001.00 |
| 4668. | ಶ್ರೀ ಸಿ.ಎಸ್. ರಾಜಣ್ಣ ಬಿನ್ ಲೇಟ್ ಶಿವರುದ್ರಪ್ಪ<br>ಚಿಕ್ಕವೀರಯ್ಯನಪಾಳ್ಯ, ತಾವರೆಕೆರೆ ಹೊ॥ | 5,00,000.00 |
| 4669. | ಶ್ರೀ ನಟರಾಜ ಷಣ್ಮುಖಶ್ರೀ ಪಾವನ್<br>ಬಿನ್ ಎನ್.ಬಿ.ಎಸ್. ಛಲಪತಿ<br>ವಿಜಯವಾಡ, ಆಂಧ್ರಪ್ರದೇಶ. | 1,116.00 |
| 4670. | ಶ್ರೀ ಶ್ರೀಕಂಠಪ್ಪ, ಸೆಕ್ರೆಟರಿ ಶ್ರೀ ರಾಜರಾಜೇಶ್ವರಿ ಆಂಗ್ಲ<br>ಮಾಧ್ಯಮ ಶಾಲೆ, ನಂದಿನಿಲೇಔಟ್, ಬೆಂ. | 3,000.00 |
| 4671. | ಶ್ರೀ ಶಿವಪ್ರಸಾದ್ ಕೆ. ಅಧ್ಯಕ್ಷರು, ಶಾರದಾಮಂದಿರ,<br>ಲಗ್ಗೆರೆ, ಬೆಂಗಳೂರು. | 2,005.00 |
| 4672. | ಶ್ರೀ ಹೆಚ್.ಪಿ. ಶಿವಪ್ಪ ಬಿನ್ ಪುಟ್ಟಪ್ಪ<br>ಕೆ.ಎಂ.ವಾಡಿ, ಹುಣಸೂರು ತಾ॥ ಮೈಸೂರು. | 2,000.00 |
| 4673. | ಶ್ರೀಮತಿ ಪಾರ್ವತಮ್ಮ ಬಿ.ಸಿ. ರೇವಣ್ಣ, ನಿವೃತ್ತ ಉಪಾಧ್ಯಾಯರು.<br>ಬ್ಯಾಲಕೆರೆ, ಮಾಗಡಿ ತಾ॥ | 2,101.00 |
| 4674. | ಶ್ರೀ ಮಂಜುನಾಥ್ ಎಸ್.ಎಂ.<br>ಹೆಚ್.ವಿ.ಆರ್.ಲೇಔಟ್, ಬೆಂಗಳೂರು. | 2,001.00 |
| 4675. | ಶ್ರೀ ಈಶ್ವರ್ ಎ. ಹಸಬಿ ಡೆಪ್ಯುಟಿ ಜನರಲ್ ಮ್ಯಾನೇಜರ್<br>ವಿಶ್ವೇಶ್ವರನಗರ, ಹುಬ್ಬಳ್ಳಿ | 25,000.00 |
| 4676. | ಶ್ರೀ ಎಸ್. ಸಿದ್ಧಲಿಂಗಸ್ವಾಮಿ<br>ಹೆಗ್ಗನಹಳ್ಳಿ ಮುಖ್ಯರಸ್ತೆ, ಸುಂಕದಕಟ್ಟೆ, ಬೆಂ. | 10,000.00 |
| 4677. | ಶ್ರೀ ಕಿರಣ್ ಮತ್ತು ಪವನ್<br>ಅರವಿಂದನಗರ, ಮೈಸೂರು. | 1,001.00 |
| 4678. | ಶ್ರೀಮತಿ ಸರ್ವಮಂಗಳಮ್ಮ ಮತ್ತು ಕೆ. ಪರಮಶಿವಯ್ಯ<br>ಜಯನಗರ್ ಪಶ್ಚಿಮ, | 10,010.00 |
| 4679. | ಶ್ರೀಮತಿ ಲಲಿತಮ್ಮ ಲಕ್ಷ್ಮಿನಾರಾಯಣ<br>ಕುಮಾರಸ್ವಾಮಿ ಲೇಔಟ್, ಬೆಂಗಳೂರು. | 1,001.00 |
| 4680. | ಶ್ರೀ ಸಿ.ಎಂ.ಎಸ್. ಶಾಸ್ತ್ರಿ ಮಾಜಿ ಎಂ.ಎಲ್.ಎ.<br>ಅಧ್ಯಕ್ಷರು, ಅ.ಕೊ.ಆ. ಬ್ಯಾಂಕ್, ಚಿಕ್ಕಮಗಳೂರು. | 1,500.00 |
| 4681. | ಶ್ರೀ ಗಂಗಪ್ಪ<br>ನಾಗಶೆಟ್ಟಿಹಳ್ಳಿ, ಮಾಗಡಿ ತಾ॥ ಬೆಂ.ಗ್ರಾ.ಜಿಲ್ಲೆ. | 2,102.00 |
| 4682. | ಶ್ರೀ ಬಿ.ಎಸ್. ಪರಮಶಿವಯ್ಯ<br>ವಿಜಯನಗರ ಪಶ್ಚಿಮ, ಬೆಂಗಳೂರು. | 25,000.00 |
| 4683. | ಶ್ರೀ ಎ.ಬಿ. ಬಳ್ಳಾರಿ<br>ಹನುಮಾನ್ ನಗರ, ಬೆಂಗಳೂರು. | 2,010.00 |
| 4684. | ಶ್ರೀ ಎ.ಪಿ. ಶಿವರುದ್ರಪ್ಪ ಬಿನ್ ಪುಟ್ಟಬಸಪ್ಪ<br>ಚುಂಚಕನಕಟ್ಟೆ, ಕೆ.ಆರ್. ನಗರ, ಮೈಸೂರು ಜಿ. | 1,001.00 |
| 4685, | ಶ್ರೀ ವಿ.ಹೆಚ್. ಬಸಪ್ಪ<br>ಮಹಾಲಕ್ಷ್ಮಿಪುರಂ, ಬೆಂಗಳೂರು. | 10,000.00 |
| 4686. | ಶ್ರೀ ಎಂ. ಮುನಿಲಿಂಗಪ್ಪ ಶ್ರೀಮತಿ ಸಾಕಮ್ಮ ಕುಟುಂಬವರ್ಗ<br>ಕೋಣನಕುಂಟೆ ಕ್ರಾಸ್, ವಸಂತಪುರ ರಸ್ತೆ, ಬೆಂಗಳೂರು. | 1,00,101.00 |
| 4687. | ಶ್ರೀಮತಿ ಉಮಾಶಂಕರ್<br>ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು. | 3,000.00 |
| 4688. | ಶ್ರೀಮತಿ ಆರ್. ಭಾರತಿ<br>ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು. | 500.00 |
| 4689. | ಶ್ರೀಮತಿ ಜಯಮ್ಮ ಮತ್ತು ಶ್ರೀ ನಂಜುಂಡಯ್ಯ ಇವರ<br>ಜ್ಞಾಪಕಾರ್ಥ ಇವರ ಮಗಳಾದ ಶ್ರೀಮತಿ ಜೆ.ಎಂ. ವಿಶಾಲ<br>ಬಿ.ಟಿ.ಎಂ. 2ನೇ ಸ್ಟೇಜ್, ಬಿ.ಜಿ. ರಸ್ತೆ, ಬೆಂಗಳೂರು. | 15,000.00 |
| 4690. | ಡಾ॥ ಶಾಂತ ಎನ್. ಕಡೆತೋಡದ ಮತ್ತು<br>ಡಾ॥ ಎಂ.ಕೆ. ಕಡೆತೋಟದ<br>ಆರ್.ವಿ.ಎಂ. ಬಡಾವಣೆ, 2ನೇ ಸ್ಟೇಜ್, ಬೆಂಗಳೂರು. | 6,500.00 |
| 4691. | ಡಾ॥ ಎಸ್.ಎಸ್. ಹಳ್ಯಾಳ್ ಮತ್ತು ಕುಟುಂಬವರ್ಗ<br>ಬಿ.ಟಿ.ಎಂ. ಮೆಡಿಕಲ್ ಕಾಲೇಜು, ದಾವಣಗೆರೆ. | 500.00 |

-ಮುಂದುವರೆಯುತ್ತದೆ.

